# ಯಾತ್ರೆ

( ಕವನ ಸಂಗ್ರಹ )



ಪಶುಪತಿ



ಶೋಭಾ ಗ್ರಂಥಮಾಲಾ ಬೆಳಗಾವಿ
೧೯೫೦

ಸಂಪಾದಕರು —

ಎಮ್ ಎಸ್ ಸುಂಕಾಪೂರ

ಎಂ ಎ

# ಹತ್ತಾಣೆ

( ಒಡೆತನವೆಲ್ಲ ಒರೆದವರದು )



ಮುದ್ರಕರು —
ಎ ಎ ಚೌಗುಲೆ,
ಶ್ರೀಚಂದ್ರಪ್ರಭ ಪ್ರೆಸ,
ಬೆಳಗಾವಿ

ಪ್ರಕಾಶಕರು:—
ಶೋಭಾ ಗ್ರಂಥಮಾಲೆ
ಬೆಳಗಾವಿ

ಓಂ ನಲ್

# ಮುನ್ನುಡಿ

ಅಂದು ಶನಿವಾರ ಮಧ್ಯಾಹ್ನ, ಕೈಯಲ್ಲಿ ಚೀಲ ಹಿಡಿದುಕೊಂಡು ಕರ್ತವ್ಯಚಿಂತೆಯ ಭಾರದಲ್ಲಿ ಮುದುಡಿಕೊಂಡು, ಜಗತ್ತಿನಲ್ಲಿ ನಡೆದ ಅಧಿಕಾರದ ದುರುಪಯೋಗದ ಬಗೆಗೆ ಧ್ಯಾನಿಸುತ್ತ ನಡೆದಿದ್ದೆ ರೇಡಿಯೋ ಥಿಯೇಟರಿನ ಬಳಿ, ಕೈಯಲ್ಲಿ ಕಾಗದದ ಕಟ್ಟೊಂದನ್ನು ಹಿಡಿದುಕೊಂಡು ವ್ಯಕ್ತಿಯೊಂದು ನನ್ನನ್ನು ಎದುರಿಸಿ-

"ಸಣಕಲ್ಲರವರು ಎಂದರೆ ನೀವೇನೇ?" ಎಂದು ಕೇಳಿತು. ಆ ಪ್ರಶ್ನೆಗೆ ನನ್ನ ಸಮಾಧಿ ಭಂಗವಾಗಿ "ಏನು?" ಎಂದೆ

"ಸಣಕಲ್ಲರವರೆಂದರೆ ನೀವೇನೇ ಎಂದು ಕೇಳಿದೆ" ಎಂದಿತು ಮರಳಿ ಆ ವ್ಯಕ್ತಿ

"ಹೌದು"

"ಹಾಗಾದರೆ ನನ್ನದೊಂದು ಕವನ ಸಂಗ್ರಹಕ್ಕೆ ಮುನ್ನುಡಿ ಬರೆದು ಕೊಡಬೇಕು"

"ಮೂಕನಿಗೆ" ಮಾತಾಡು ಎಂದಹಂತೆ! ಮೂರು ನುಡಿಗಳೂ ಬರದವನಿಗೆ ನಿಮ್ಮ ಕವನ ಸಂಗ್ರಹಕ್ಕೆ ಮುನ್ನುಡಿ ಬರವ ಯೋಗ್ಯತೆ ಇದ್ದೀತೇ? ಅದಿರಲಿ, ಈಗ ನೀವು ಇರುವುದಲ್ಲಿ ನಿಮ್ಮ ವಿದ್ಯಾಭ್ಯಾಸಂಗವೆಲ್ಲಿ?" ಎಂದು ಕೇಳಿದೆ

"ಲಿಂಗರಾಜ ಕಾಲೇಜಿನಲ್ಲಿ, ಮೊದಲ ವರ್ಷ"

"ಅಲ್ಲಿ ಮಹಾ ಪ್ರಾಧ್ಯಾಪಕರೂ ಕವಿಗಳೂ ಇರುವಾಗ ನನಗೇಕಯ್ಯಾ ಈ ಭಾರ?

"ಇರಬಹುದು ಆದರೂ ನೀವೇ ಬರೆದು ಕೊಡಬೇಕೆಂದು ನನ್ನ ಆಶೆ"

"ನಿಮ್ಮ ಆಶೆಯೇನೋ ಒಳ್ಳೆಯದೆ! ಆದರೆ ನಾನು ಈ 'ಸಹಕಾರ'ದ ಕೊಳ್ಳದಲ್ಲಿ ಬಿದ್ದ ಮೇಲೆ, ಸಾಹಿತ್ಯವನ್ನೂ, ಸಾಹಿತ್ಯದ ಹಾದಿಯನ್ನೂ ಕಾಣದೇ ಬಹಳ ದಿನಗಳಾದುವು, ನನ್ನ ಇಂದಿನ ಈ ನೂರಾ ಎಂಟು ತೊಂದರೆಗಳಲ್ಲಿ, ಕರ್ತವ್ಯದ ಸಂಕೋಲೆಯಲ್ಲಿ ನನಗಿದು ಅಸಾಧ್ಯವೆಂದು ಕಾಣುತ್ತಿದೆ"

"ನನಗಾಗಿ ಅಸಾಧ್ಯವಿದ್ದುದನ್ನು ಸಾಧ್ಯ ಮಾಡಿಕೊಳ್ಳಿ"

"ಸಾಧ್ಯ ಮಾಡಿಕೊಂಡರೂ ನಾನು ಬರೆದು ಕೊಡುವ ಮುನ್ನುಡಿ ಸರಿಯಾಗದಿದ್ದರೆ?"

"ಅದು ಹೇಗೇ ಆಗಲಿ, ಅದೂ ನನ್ನ ಇಚ್ಛೆ" ಎಂದು ಪಶುಪತಿ ಅವರು ದೃಢತೆಯಿಂದ ನುಡಿದರು

"ಆಗಲಿ ಎಂದು ಬೇಕು ನಿಮಗೆ ಮುನ್ನುಡಿ?"

"೧೯೫೧ ಜನವರಿ ಹತ್ತಕ್ಕೆ, ಅಂದು ಲಿಂಗರಾಜ ಜಯಂತಿ ಆ ಶುಭ ಸಮಯದಲ್ಲಿ ನನ್ನ ಕವನ ಸಂಗ್ರಹವು ಪ್ರಕಟವಾಗಲಿದೆ"

"ಈ ನಾಲ್ಕೈದು ದಿನಗಳಲ್ಲಿ ಹೇಗೆ ಸಾಧ್ಯ"

"ನೋಡಿ, ಯತ್ನಿಸಿರಿ"

ಮರುದಿನ ಇಳಿಹೊತ್ತಿಗೆ ಕವನ ಸಂಗ್ರಹದ ಹಸ್ತಪ್ರತಿಯನ್ನು ತೆಗೆದು ಕೊಂಡು ಶ್ರೀ ಪಶುಪತಿ ಅವರು ನಮ್ಮ ಮನೆಗೆ ಬಂದರು 'ಲಿಂಗರಾಜ ಜಯಂತಿ' ಬಂದಿತು ಸಂದಿತು, ೧೫ನೇ ತಾರೀಖು ತುಂಬಿತು ಕವನ ಸಂಗ್ರಹವು ಹಾಗೇ ಬಿದ್ದಿತ್ತು, ನನ್ನ ಬಗೆಯು ಬಿಡುವಿಗಾಗಿ ಕಾಯ್ದು! ನಾನೋ ದಿನದಿನಕ್ಕೂ ತೊಂದರೆಗಳ ಬಿಡಿಸಲಾರದ ತೊಡಕುಗಳಲ್ಲಿ ಹೆಚ್ಚು ಹೆಚ್ಚಾಗಿ ಸಿಕ್ಕಿಕೊಂಡು ತಡವರಿಸುತ್ತಿದ್ದೆ, ಶ್ರೀ ರೆಡ್ಡಿಯವರು ಮತ್ತೆ ಮತ್ತ ಎಡತಾಕಿದರು

ಶ್ರೀ ಪಶುಪತಿ ರೆಡ್ಡಿಯವರನ್ನು ನಾನು ನೋಡಿದುದು ಇದೇ ಮೊದಲು ಅವರ ಬಾಲ್ಯ ಜೀವನದ ಬಗೆಗಾಗಲೀ, ಶಿಕ್ಷಣದ ಬಗೆಗಾಗಲೀ, ಸಾಹಿತ್ಯ ದಲ್ಲಿ ಉಂಟಾದ ಪ್ರವೃತ್ತಿಯ ಬಗೆಗಾಗಲೀ ನಾನು ಏನೊಂದು ಅರಿಯೆ, ಅವರ ಊರು ಶಿರಹಟ್ಟಿಯಂತೆ ಪ್ರಾಥಮಿಕ ಅಭ್ಯಾಸ ಮುಗಿಸಿಕೊಂಡು ಈಗ ಕಾಲೇಜಿನ ಉಚ್ಚ ಶಿಕ್ಷಣಕ್ಕಾಗಿ ಈ ಬೆಳಗಾವಿಗೆ ಬಂದಿರುವರಂತೆ ಇಷ್ಟೇ ಗೊತ್ತು, ಅವರು ಬರೆದ ಕವಿತೆಗಳು ವಿಶೇಷವಾಗಿ ಎಲ್ಲಿಯೂ ಪ್ರಕಟವಾಗಿಲ್ಲ ಹೀಗಾಗಿ ಎಷ್ಟೋ ಜನರಿಗೂ ಸಾಹಿತಿಗಳಿಗೂ ಅವರ ಪರಿಚಯವಾಗದಿರುವುದು ಸಹಜ

ತಮ್ಮ ಮಹತಿ ಘನತೆಗಳನ್ನು ತಾವೇ ಉಸಿರಿ, ತಮ್ಮ ಪರಿಚಯ ವನ್ನು ತಾವೇ ಮಾಡಿಕೊಟ್ಟು ಸಮಾಜದಲ್ಲಿ ಮುಂದೆ ಬಂದು ಹೆಸರುಗಳಿಸ ಬೇಕೆನ್ನುವ ವ್ಯಕ್ತಿಯೂ ಅವರಲ್ಲವೆಂದು ತೋರುತ್ತಿದೆ ಅವರ ಸಹಜತೆಯು

ಮುಸುಕಿನಲ್ಲಿ ಹುದುಗಿರುವ ಅವರ ಕವಿತ್ವವನ್ನೂ, ಸಾಹಿತ್ಯವನ್ನೂ ಅವರ ಅಂತರಂಗದ ಪರಿಚಯವಿಲ್ಲದವರು ಒಮ್ಮೆಲೇ ಅರಿಯುವದು ದುಸ್ತರವು, ಅವರ ಕವಿತ್ವವು ಬೂದಿ ಮುಚ್ಚಿದ ಕೆಂಡದಂತೆ ಅವರ ಹೃದಯದ ಮೂಸೆಯಲ್ಲಿ ಭಾವದ ಕಾವಿನಲ್ಲಿ ಕರಗಿ ಕುದಿದು ಪರಿಶುದ್ಧವಾಗಿ ಒಳಗೊಳಗೇ ಉಕ್ಕುಕಿಸಲು ಯತ್ನಿಸುತ್ತಿದ

ಅವರ ' ಯಾತ್ರಿ ' ಎಂಬ ಈ ಕವನ ಸಂಗ್ರಹದಲ್ಲಿ ಒಟ್ಟಿಗೆ ಹದಿನೈದು ಕವನಗಳಿದ್ದು ' ಯಾತ್ರಿ 'ಯಿಂದ ಆರಂಭವಾಗಿ 'ಭಾವನಾಸಾಮ್ರಾಜ್ಯ'ದ ಪಟ್ಟವೇರಿ ' ಸಂಜೆ' ಯ ಹೊಂಬೆಳಗಿನಲ್ಲಿ ರಾಗವೇರಿ ' ಮೇಘಹಂಸ ' ವಾಗಿ ತೇಲಿ,' ತಪೋವನ ' ದಲ್ಲಿ ದಿವ್ಯದೃಷ್ಟಿ ಪಡೆದು 'ಚಲುವೆ ಯ ಒಲುಮೆ'ಯಲ್ಲಿ ಬಲಗೊಂಡು 'ಒಡೆದ ಕನ್ನಡಿ' ಯಲ್ಲಿ ಸಹಸ್ರರೂಪುಗೊಂಡು 'ಮತ್ಸರ' ಭಾವನೆಗೆ ಅಚ್ಚರಿಗೊಂಡು 'ಸನ್ನಹಾಡಿ' ನಲ್ಲಿ ಚನ್ನಾಗಿ ಹರಿದು ಅವರ ಕವಿತೆಯು ರಸಪಾಕಕ್ಕೆ ಇಳಿಯಲು ಯತ್ನಿಸಿದೆ ತ್ರಯೋದಶಗುಣ ತಾಂಬೂಲದಂತೆ ಒಟ್ಟಿಗೆ ರಾಗರಂಜಿತವಾಗಿದ

ಅವರ ಆರಂಭದ ಕವನವಾದ ' ಯಾತ್ರಿ' ಇದು ಒಂದು ದೀರ್ಘಕವನವು 'ಉಳವಿ'ಯ ಚನ್ನ ಬಸವಣ್ಣನ ದರ್ಶನಕ್ಕಾಗಿ ಭಾರತಹುಣ್ಣಿಮೆಯ ಸುತ್ತ ಕೈಕೊಂಡ ಯಾತ್ರೆಯಿದು ' ಉಳವಿ 'ಯ ಯಾತ್ರೆಯು ಕವಿಯ ಪ್ರತಿಭೆಯ ಕಲ್ಪನೆಯ ವಿಕಾಸಕ್ಕೂ ಪ್ರಕಾಶಕ್ಕೂ ಒಂದು ನಿಮಿತ್ತ ಮಾತ್ರ ನಾಗಿದೆ ಕವನದುದ್ದಕ್ಕೂ ಪ್ರಕೃತಿಯ ವಿವಿಧ ದೃಶ್ಯಗಳ ರಮ್ಯವಾದ ವರ್ಣನೆಗಳಿವೆ ಇರುಳಿನಲ್ಲಿ ಮಂಜುಸೂಸಿ ಕುಳಿರ್ಗಾಳಿ ಬೀಸುವಾಗ ಹೋರಿಗಳು ಕೊರಳ ಗಂಟೆಗಳ ಚಿಂಟಣಿಗೆ ತಲೆದೂಗುತ್ತ ಎಳೆಯುತ್ತಿರುವ ಚಕ್ಕಡಿಯಲ್ಲಿ ತಾಯ್ಮಡಿಲಿನಲ್ಲಿ ಶಿಶುವು ಕೂಸಿನಂತೆ ಮಲಗಿ, ಹೊಂಗಿರಣವೆಂದು ಬೆಳಗುವದೋ, ಎಂದು ಚಡಪಡಿಸುತ್ತಿರುವನು ಹುಬ್ಬಳ್ಳಿ ಸರಿಸಿ, ಧಾರವಾಡ ಮರೆಸಿ ಹಾದಿಯನ್ನು ಕ್ರಮಿಸುತ್ತ ಗಾಡಿಯ ಗಾಲಿಗಳು ಉರುಳುತ್ತಿರಲು ನಸುಕು ಹರಿಯುವದು ಕವಿಯು ಈ ಯಾತ್ರೆಯ ನೆವದಿಂದ ಬೆಳಗನ್ನೂ, ಮುಂದೆ ಬರುವ ಕಾಳೀ ನದಿಯನ್ನೂ, ನದಿಯಲ್ಲಿ ನೀರಿಗಾಗಿ ಬಂದ ಕನ್ನಿಕೆಯರನ್ನೂ, ನೀಲಗಗನದಲ್ಲಿ ತನ್ನಾಟದೋಘದಲ್ಲಿ ತೇಲುವ ಮೇಘ ಮಾಲೆಯನ್ನೂ, ಬನದೇವಿಯ ಪರಿಸರವನ್ನೂ, ಧವಳ ಚಂದ್ರಿಕಾ ವಿಸ್ತಾರವನ್ನೂ, ಶ್ರೀ ಚೆನ್ನಬಸವಣ್ಣನ ಗುಡಿಯ ಮೀರಿ ನೇ ಮಿಂಚುವ ಕಳಸವನ್ನೂ, ಗುಡಿಯನ್ನೂ ಜಾತ್ರೆಯಲ್ಲಿ ಸಾಲಾಗಿ ನಿಂತ

ಅಂಗಡಿಯ ಅಂದವನ್ನೂ,ಅಲ್ಲಿ ನೆರೆದ ಭಿಕ್ಷುಗಣ ಕೋಟೆಯನ್ನೂ, ಈ ಗಡಣ ವನ್ನೂ, ಜಂಜಡವನ್ನೂ ದಾಟಿ ಚಿನ್ನಣ್ಣನಡಿಯ ಕಂಡಾಗ, ಉಕ್ಕುವ ಭಕ್ತಿ, ಆಂತರಿಕ ಶಕ್ತಿ ಭಾವಗಳನ್ನೂ, ಗುಡಿಯ ಬಳಿಯಲ್ಲಿ ಹರಿವ ತೊರೆಯಲ್ಲಿ ಮೊರೆವ ಜಲಪಾತವನ್ನೂ, ತೊರೆಯ ಬದಿಗಿರುವ ಗೋವ ಗವಿಯನ್ನೂ, ನಡುವಗಲಲ್ಲಿ ಬಿಸಿಲ ಬೇಗೆಗೆ ಕುಂದಿ ತೊರೆಯಲ್ಲಿ ಮಿಂದು ಹೊಂದಿದ ಸೊಗ ವನ್ನೂ, ಅಲ್ಲಿಯ ಜೊನ್ನದಿರುಳನ್ನೂ, 'ರಕ್ಕಸಘಟ್ಟವನ್ನೂ, ಇಳುಕಲ ದಾರಿಯನ್ನೂ, ಅಲ್ಲಿ ಹರಿವ ಕಿರುದೊರೆಯನ್ನೂ, ಕಿರುಮೊರೆಯ ಕಲದಿನಿಂದ ಬಿರ್ದಪುರವನ್ನೂ, ಅಲ್ಲಿ ಕೋಗಿಲೆಯ ದನಿಯ ಮೀರ್ದ ಇಂಚರದಿಂದ ಹಾಡುತಿರುವ ವನ್ಯಬಾಲೆಯನ್ನೂ, ಅವಳನ್ನು ಕಂಡು ತನ್ನಲ್ಲಿ ಉಂಟಾದ ಬಾವನಗಳನ್ನೂ, ಆವಳ ಮಿಲನದಲ್ಲಿ ಪಡೆದ ಸುಖಾನಂದವನ್ನೂ ಅವಳನ್ನು ಕನಸಿನಲ್ಲಿ ಅಗಲಿ, ಉಂಟಾದ ವಿರಹ ದುಃಖವನ್ನೂ, ಆ ಚೆಲುವೆಯನ್ನು ನನೆದು ತಪಿಸುತ್ತ ಅಳಲುತಿರಲು ಕೆದರಿರ್ದ ಕುರುಳನ್ನು ಬೆರಳಿನಿಂದ ನೇ ವರಿಸಿ, ಮದಿರೆ ಚುಂಬುಟ ಮುತ್ತಿನೊಲವ ನೀಡಲಿಕ್ಕೆ,ಆ ಜದುರೆ ಬಾಗಿರಲು ಎದೆದುಂಬಿ ಬಗೆಗೆ ಬಗೆ ಕೂಡಿರಲು ಸುರರೆಲ್ಲ ಬಂದು, ಹರುಷದಲಿನಿಂದು ಮಂಗಲವನೀಡಿ ಹರಸಿರಲು, ಚಿನ್ನಣ್ಣನಂದು ಶುಭಮಸ್ತು ಎಂದು ಹರಸಿ ರಲು ಎಲ್ಲೆಲ್ಲಿಯೂ ಸೊಗತುಂಬಿ ತುಳುಕುತಿರಲು, ಒದುಗಾರಿ ಸಿಡಿಲು ಗಳ ಆಘಾತಕ್ಕೆ ಕಣಸೊಡೆದ ರೀತಿಯನ್ನೂ, 'ಮಚ್ಚೆಲ್ಲ ಪ್ರೇಮ ಇಲ್ಲದಗಿ ಕಾಮ ಒಣಿಸುವುದು ತಿರುಗಿ ತಿರುಗಿ, ಎಂದು ಅನುಭವಕ್ಕೆ ಬಂದ ಸರಿ ಯನ್ನೂ, ನಿಜ ಬೆಳಗು ಬಂದು ಎದೆಯ ಕನಸಿನಿಂದ ಕವಿಯನ್ನು ಎಚ್ಚರಿಸೆ, ಮೊಸಹುಟ್ಟು ಬಂದು, ಹೊಸ ಮನುಜನಾಗಿ ಅನುಭವದಿಂದ ಅನುಭಾವಕ್ಕೆ ಬಂದ ಕ್ರಮವನ್ನೂ ಮನಂಬುಗುವಂತೆ ಒಣ್ಣಿಸಿದ್ದಾರ

'ಮೇಘದೂತ' ವು ನಿಮಿತ್ತ ಮಾತ್ರವಾಯ್ತು ಮಹಾಕವಿ ಕಾಳಿ ದಾಸನು ತನ್ನ ಹೃದಯದಲ್ಲಿ ಬಿಂಬಿಸಿದ್ದ ಪ್ರಕೃತಿ ಸೌಂದರ್ಯವನ್ನು ಸೂರೆ ಮಾಡಿದನು 'ಕಾದಂಬರಿ' ಯು ಒಂದು ನೆವ ಮಾತ್ರವಾಯಿತು ಬಾಣ ಮಹಾ ಕವಿಯು ತನ್ನ ಕಲ್ಪನೆಯನ್ನು ಚುಂಬಿಸಿದ್ದ ಸ್ವರ್ಣಸ್ವಪ್ನವನ್ನು ರಸೋದಧಿಯಲ್ಲಿ ಮಥಿಸಿದನು ಅಂತೆಯೇ ಶ್ರೀ ರೆಡ್ಡಿಯವರಿಗೆ 'ಯಾತ್ರೆಯು ಒಂದು ಕಾರಣ ಮಾತ್ರವಾಗಿದೆ ಅದರಿಂದ ತಾವು ತಮ್ಮ ಯಾತ್ರೆಯಲ್ಲಿ ತಮ್ಮ ಜೀವನ ಯಾತ್ರೆಯಲ್ಲಿ ಕಂಡುಂಡ ಸೊಬಗನ್ನೆಲ್ಲ ತಮ್ಮ ಶಕ್ತಿಗನು ಸರಿಸಿ ಚಿತ್ರಿಸಲಿಕ್ಕೆ ಹವಣಿಸಿದ್ದಾರೆ

ಪುಣ್ಯಕ್ಷೇತ್ರವಾದ 'ಉಳಿವೆ'ಯ ಯಾತ್ರೆಗೆ ಹೋಗಿ, ಅಲ್ಲಿಯ ಸೊಗ ಸೊಬಗುಗಳನ್ನೂ ದಿವ್ಯತೆಯ ಭವ್ಯತೆಗಳನ್ನೂ, ಕಂಡು ಉಂಡು ಮನಗಂಡವರು ಈ ಯಾತ್ರೆಯ ಬಗೆಗೆ ಸರಿಯಾದ ಅಭಿಪ್ರಾಯವನ್ನು ಕೊಡುವಂತೆ ಇದರ ಯಥಾರ್ಥತೆಯನ್ನು ಅರಿಯುವಂತೆ, 'ಉಳಿವೆಯನ್ನು' ಕನಸಿನಲ್ಲಿ ಕೂಡ ಕಾಣದ ನಾನು ಏನು ಹೇಳಬಹುದು ! ಶ್ರೀ ಪಶುಪತಿಯವರ ಯಾತ್ರೆಯ ಕಲ್ಪನೆಯ ಊರುಗೋಲಿನ ಮೇಲೆಯೇ ನನ್ನ ಮುನ್ನುಡಿಯು ಮುನ್ನಡೆಯ ಹವಣಿಸಿದೆ

ಕೃತಿಯ ಪರಿಪೂರ್ಣತೆಗೆ ಹದಿನೆಂಟಂಗಗಳು ಅಗತ್ಯವೆಂದು ಲಾಕ್ಷಣಿಕರು ಹೇಳಿರುವರು ಇಲ್ಲಿ ಹದಿನೆಂಟಕ್ಕಿಂತ ಕಡಿಮೆ ಅಂಗಗಳಿರಬಹುದು ಇದ್ದ ಕೆಲವೊಂದು ಅಂಗಗಳ ವರ್ಣನೆಗಳು ಸರಸವಾಗಿ ಬಂದು ಈ ಪುಟ್ಟ ಕೃತಿಗೆ ಮೆರುಗನ್ನು ತಂದಿವೆ

ಈ ಯಾತ್ರೆಯು ಜೀವನದ ಅನಂತ ಯಾತ್ರೆಯ ಒಂದು ರೂಪಕವೋ ಏನೋ ಎಂದು ಒಮ್ಮೊಮ್ಮೆ ಭಾಸವಾಗುತ್ತಿದೆ 'ಕೃತಿಗೆ ಹದಿನೆಂಟಂಗಂ' ಎಂಬಂತೆ ಜೀವನದ ಪರಿಪೂರ್ಣತೆಗೆ, ಸಿದ್ಧಿಗೆ, ಸಹಸ್ರಾವಸ್ಥೆಯ ಸಹಸ್ರಾನುಭವಗಳು, ಇಲ್ಲಿ ಬಂದಿರುವ ವರ್ಣನೆಗಳು ಪ್ರಕೃತಿಯ ವಿವಿಧ ವರ್ಣನೆಗಳು, ವಿವಿಧ ಪ್ರಕೃತಿಯ ವರ್ಣನೆಗಳು, ಜೀವನದ ವಿವಿಧಾವಸ್ಥೆಯ ಅನುಭವಗಳು, ಅನುಭಾವಗಳು ಮಾಯೆಯ ಸುಳಿಗೆ ಸಿಕ್ಕು ಪ್ರಪಂಚದ ದ್ವಂದ್ವದಲ್ಲಿ ಉಯ್ಯಾಲೆಯಾಡುವ ಜೀವನು ಅದರಿಂದ ಅತೀತನಾಗಿ ಉನ್ನತನಾದಾಗಲೇ ಅವನ ಮುಂದಣ ದಾರಿ ಸುಲಭವೆಂದೂ ಸುಭಗವೆಂದೂ ಈ ಯಾತ್ರೆಯು ಸೂಚ್ಯವಾಗಿ ಸಾರುವಂತಿದೆ ಕವಿಯು ವನ್ಯಬಾಲೆಯ ಮಾಯೆಯ ಸುಳಿಗೆ ಸಿಕ್ಕು ಆ ಕನಸನ್ನು ಒಡೆದು ಹೊರಬಿದ್ದಾಗ ಅನ್ನುವ ಮಾತು ಇದು

"ಮುಂದಿರ್ಪದಾರಿ ನಿಮಿಷದಲಿ ಹಾರಿ ದಾಟುವಾ ಸರಳ ದಾರಿ"

ಆದರೆ ಇಲ್ಲಿ ಕೆಲವೊಂದು ಪ್ರಶ್ನೆಗಳು ಏಳುತ್ತಿವೆ ಕವಿಯು ಉಳಿವೆಯ ಯಾತ್ರೆ ಮುಗಿಸಿಕೊಂಡು ಹಿಂದಿರುಗಿ ಊರದಾರಿ ಹಿಡಿದಿರುವಾಗ 'ಕಿರುದೊರೆಯು ಕೆಲದಿ ಹೂ ಬಿರಿದ' ವನದಿ ನಿಂದಿರುವ ಶಿವನ ಪುರದ ಬಳಿಯಲ್ಲಿ ಆ ವನ್ಯಬಾಲೆಯ ದರ್ಶನವಾಗುತ್ತದೆ ಅವಳು ಹಾಡಿ, ಭಿಕ್ಷೆ ಬೇಡುತ್ತಾಳೆ ಅವಳ ರೂಪಕ್ಕೂ, ಅದಕ್ಕಿಂತ ಹೆಚ್ಚಾಗಿ ಅವಳ ಗಾನಕ್ಕೂ ಮನಸೋತ ಕವಿಯು ಅವಳಿಗೆ ಮೋಹಿತನಾಗಿ ತಾಯಿಯನ್ನು ತೊರೆದು

ಅವಳನ್ನು ಹಿಂಬಾಲಿಸುತ್ತಾನೆ ಅವಳು ಅವನನ್ನು ತನ್ನ ಗುಡಿಸಲಲ್ಲಿ ಕುಳ್ಳಿರಿಸಿ ಏನೆಲ್ಲ ಮಾಟ ಮಾಡಿ, ರಸಬಾಳೆ ನೀಡಿ, ಹುಸಿಗೋಪದರಳು ಚೆಲ್ಲೆ ಆ ಒಂದೆ ನಿಮಿಷದಲ್ಲಿ ಕವಿಗೆ ಒಂದೆಂಬ ನೊಲ್ಲು ಮಿಡಿದಿತ್ತು ಎದೆಯ ಆಳ ಬಳಿಯಲ್ಲಿ ಕವಿಯು ಒಂದು ' ಮುನಿನೇಕೆ? ' ಎಂದು ದೈನ್ಯದಲಿ ತಪಿಸುತಿರಲು 'ತುಟಿಗೆ ತುಟಿಯನೀಡಿ ಎದೆಗೆ ಎದೆಯ ನೀಡಿ ಮುನಿಸೆನ್ನ ಬೇಡಿ' ಎಂದವಳು ಬೇಡಿಕೊಳ್ಳುತ್ತಾಳೆ ಇಂಥ ಚೆಲುವೆಯೊಡನೆ ಇರುಳಲ್ಲಿ ಗುಡಿಸಿಲಲ್ಲಿ ಕವಿಯು ಕನಸು ಕಾಣುವನು ಕನಸಿನಲ್ಲಿ ಅವಳನ್ನು ಅಗಲಿ ಮತ್ತೆ ಕೂಡಿದಾಗ ಆ ಮಿಲನಕ್ಕೆ ಒಪ್ಪಿ ಚನ್ನಬಸವಣ್ಣನು ' ಶುಭಮಸ್ತು ' ಎನ್ನುವನು ಸುರರೂ ಹರಸುವರು ಮುಂದೆ ಬಿರುಗಾಳಿ ಸಿಡಿಲುಗಳ ಹೊಡೆತಕ್ಕೆ ಕನಸು ಬಿರಿಯುವದು

ಕನಸೇನೋ ಬಿರಿಯಿತು ಎಚ್ಚರವಾದಾಗ ಕವಿಯು ಆ ಗುಡಿಸಲಲ್ಲೇ ಆ ವನ್ಯ ಬಾಲೆಯ ಜೊತೆಯಲ್ಲೇ ಇರಬೇಕಿತ್ತು ಆದರೆ ಅವಳನ್ನು ಎಲ್ಲಿ ತ್ಯಜಿಸಿದನು ಹೇಗೆ ತ್ಯಜಿಸಿದನು ಎಂಬುದು ಉಲ್ಲೇಖವಾಗಿಲ್ಲ 'ತಂಗಾಳಿ ಸೂಸಿ ನಲ್ಲೆಯನು ಬಿಡಿಸಿ ಕನಸನ್ನು ಕೆಡಿಸಿ ತಿರುಗಿಧರೆಯನ್ನು ತೋರಿತ್ತು' ಎಂಬ ಮಾತಿನಿಂದಲೇ ಕವಿಯ ಆ ಸ್ವಪ್ನ ಭಂಗದ ಜೊತೆಗೆ ಅವಳ ಸಹವಾಸ ಭಂಗವೂ ಆಗಿರಬೇಕೆಂದು ವಾಚಕರು ಭಾವಿಸದಿದ್ದರೆ ಜೇರೆದಾರಿಯಿಲ್ಲ

ಇತ್ತ ಕವಿಯು ವನ್ಯಬಾಲೆಯ ಬೆನ್ನು ಹತ್ತಿ ತಿರುಗುವಾಗ ಅತ್ತ ತಾಯಿಯ ಅವಸ್ಥೆಯೇನು ? ಇತರ ಪರಿವಾರದವರ ಗತಿಯೇನು ? ಎಂಬುದೂ ಸ್ಪಷ್ಟವಿಲ್ಲ ಅಲ್ಲದೆ ತಾಯಮಡಿಲಲ್ಲಿ ಶಿಶುವಿನಂತೆ ಮಲಗಿದ ಕವಿ ಒಮ್ಮೆಲೇ ಪ್ರಬುದ್ಧನಾದನೆಂದೆನ್ನಬೇಕೇ ? ಈ ಎಲ್ಲ ಸಮಸ್ಯೆಗಳಗೆ ಇಲ್ಲಿ ಸರಿಯಾದ ಉತ್ತರವೂ ಪರಿಹಾರವೂ ಇಲ್ಲ ಆದುದರಿಂದ ಸುಸಂಬದ್ಧತೆಯಲ್ಲಿ ಎಲ್ಲಿಯೋ ತೂಕ ತಪ್ಪಿದಂತೆ ಅನಿಸುತ್ತದೆ ಅಲ್ಲದೆ ದೀರ್ಘತೆಯ ಮೂಲಕ ಕೆಲವೆಡೆಯಲ್ಲಿ ಕಾವು ಆರಿ, ಶೈಲಿಯಲ್ಲಿ ಶೈಥಿಲ್ಯವು ಕಂಡು ಬರುವುದಲ್ಲವೆ, ಪದ್ಯವು ಗದ್ಯಕ್ಕಿಳಿದಂತೆ ಭಾಸವಾಗುವದು. ಪ್ರಾಸಕ್ಕಾಗಿ ಒಂದೊಂದು ಸಲ ಅನಾವಶ್ಯಕ ಶಬ್ದಗಳೂ ಅಪಶಬ್ದಗಳೂ, ಅನ್ಯಭಾಷೆಯ ಶಬ್ದಗಳೂ ಸೇರಿಕೊಂಡಿವೆ ಅದರಂತೆಯೇ ಒಂದೊಂದು ಕಡೆಗೆ ಉಚಿತಾರ್ಥದಲ್ಲಿ, ಉಚಿತಲಿಂಗದಲ್ಲಿ ಉಚಿತ ಶಬ್ದ ಪ್ರಯೋಗವಾಗಿಲ್ಲ ಅಲ್ಲೊಂದು ಇಲ್ಲೊಂದು ವ್ಯಾಕರಣದೋಷಗಳೂ ಇವೆ ಒಂದೆರಡು

ಅಸ್ಪಷ್ಟತೆಯ ದೋಷಗಳೂ ಘಟಿಸಿವೆ ಅಚ್ಚುಗೊಳಿಸುವ ಮುನ್ನ ಇವನ್ನೆಲ್ಲ ತಿದ್ದಿ ತೊಡೆದು ಸರಿಪಡಿಸಬಹುದಾಗಿದ್ದಿತು ಇದು ಸಾಧನೆಯ ಪಥದಲ್ಲಿ ಸಹಜವಾಗಿರಲೇಬೇಕು ಕ್ಷಮ್ಯವೆಂದು ಹೇಳಿದರೆ ತಪ್ಪೇನು ?

ಇನ್ನು ಉಳಿದ ಬಿಡಿ ಕವನಗಳ ಬಗೆಗೆ ಹೇಳಬೇಕಾದರೆ 'ಸಂಜೆ' 'ಮೇಘಹಂಸ' 'ತಪೋವನ' 'ಗಿರಿಮೇಘ' ಲಗ್ನ, 'ನನ್ನ ಹಾಡು' ಇವು ನಿಸರ್ಗಪರ ಕವನಗಳು ಚಲುವೆಗೆ ಕರೆ, ಎನ್ನೊಲವಿಗೆ, ಒಡೆದ ಕನ್ನಡಿ, ಮತ್ಸರ, ಇವು ಪ್ರೇಮಪರ ಗೀತಗಳು ಭಾವನಾಸಾಮ್ರಾಜ್ಯವು ಒಂದು ಭಾವಗೀತೆ, ಸಂಜೆ, ತಪೋವನ, ನನ್ನ ಹಾಡುಗಳಲ್ಲಿ ಶ್ರೀ ಕುವೆಂಪುರವರ ಕವನಗಳ ವರ್ಚಸ್ಸೂ, ಛಾಯೆಯೂ ಮೂಡಿದೆ, ಏಕೆ ?

' ಮುತ್ತನು ಅರಸುತಿ ಹಾಡಿದೆ ಕೆಲವು
ಬೆಳಗೂ ಬೈಗೂ ಕಲಿಸುದುದು,'
ಅವ್ಯಕ್ತಪುಡಿಲಿಂ ಕಬ್ದೆಸು ಹಲವು
ಎನಗೆಂದೇ ತಾ ಹಾಡಿಮುದ"

ಎಂಬುದನ್ನು ಒದುವಾಗ ಶ್ರೀ ಕುವೆಂಪುರವರ 'ಕಬ್ಬದಂಗನೆ'ಯು ನೆನಪಾಗುತ್ತದೆ ಅಲ್ಲಲ್ಲಿ ಶ್ರೀ ಬೇಂದ್ರೆಯವರ ಕವಿತೆಯ ಛಾಯೆಯೂ ನ್ವಲ್ಪ ಇದೆ

" ಎಳೆಯ ತಳಿರ ಕೊರಳಿನಿಂದ
ಅಡಗಿ ನುಡಿಯೆ ಕೋಕಿಲ "

ಎಂಬುದನ್ನು ಒದುವಾಗ ಶ್ರೀ ಬೇಂದ್ರೆಯವರ—
" ಗಿಡಗಂಟಿಯ ಕೊರಳೊಳಗಿಂದ ಹಕ್ಕಿಯ ಹಾಡು" ಎಂಬುದೂ ನೆನಪಿಗೆ ಬರುತ್ತದೆ

ಇನ್ನು ಇಲ್ಲಿ ಪ್ರಯೋಗಿಸಲ್ಪಟ್ಟ ಕವಿಸಮಯದ ಬಗೆಗೆ ಒಂದು ಮಾತು – ದೇವದಾನವರು ಕೂಡಿ ಉದಧಿಯನ್ನು ಮಥಿಸಿದಾಗ, ಅದರ ಉದರದಿಂದ ಲಕ್ಷ್ಮಿ, ಕೌಸ್ತುಭ, ಪಾರಿಜಾತಕ, ಸುಧೆ, ಚಂದ್ರ ಹೀಗೆ ಹದಿನಾಲ್ಕು ರತ್ನಗಳು ಹುಟ್ಟಿದವೆಂದು ಹೇಳುತ್ತಾರೆ ಪ್ರಾಚೀನ ಕವಿಗಳು ತಮ್ಮ "ಕವಿಸಮಯದಲ್ಲಿ" ಜಲಧಿಯನ್ನೂ, ಮೇಘವನ್ನೂ ಪುಲ್ಲಿಂಗವೆಂದು ಗ್ರಹಿಸಿ, ಸಮುದ್ರರಾಜ, ಮೇಘರಾಜ ಎಂದು ಕರೆದರು ಆದರೆ ಈ ಕವಿಯು

“ಜಲಧಿ ಬಂದಿಹಳು ನೋಡ” ಎಂದೂ ಅದೊ ಮೇಘಮಾಲೆ (ಸ್ತ್ರೀ) ತೊಡಿಸಿಹುದು ಮಾಲೆ ತನ್ನಿನಿಯ (ಪು) ಶೈಲತುದಿಗೆ ಎಂದೂ, ಆ ಮೇಘ ಲಲನೆ ಗಿರಿ ಇನಿಯನೊಡನೆ ಮುತ್ತಿಟ್ಟು ನಲಿಯುತಿಹಳು ಎಂದೂ, ಗಿರಿಯಪ್ಪಿ ಚುಂಬಿಸಿರೆ ಮೇಘ ಮೊಗಕೆಂಪಾಗಿ ನವವಧುವ ತೆರದಿ ಎಂದೂ ಪ್ರಣಯದ ಭರದಲಿ ಅಪ್ಪಿರೆ ಗಿರಿಯು ಮೇಘವ ಮೆಲ್ಲನೆ ಚುಂಬಿಸುವಂತೆ ಎಂದೂ ಹೇಳುವರು ಇದು ಉಚಿತವೋ ಅನುಚಿತವೋ, ವಿಚಾರಣೀಯವಾದುದು. ಭಾವ, ಭಾಷೆ, ಶೈಲಿ, ಛಂದಸ್ಸುಗಳಲ್ಲಿ ಅಂದಿನಿಂದ ಇಂದಿನ ವರೆಗೆ ಕವಿತೆಯು ಪರಿವರ್ತನ ಶೀಲವಾಗುತ್ತ ಬಂದಿರುವಾಗ ಕವಿಸಮಯದಲ್ಲಿಯೂ ಏಕೆ ಹಾಗೆ ಆಗಬಾರದು, ಎಂಬ ಪ್ರಶ್ನೆಗೆ ಇಂದಿನ ಸಾಹಿತ್ಯವು ಕೊಡುವ ಉತ್ತರವೇನು ?

ಇಷ್ಟೆಲ್ಲ ಹೇಳಿದ ಮೇಲೆ ಶ್ರೀ ‘ಪಶುಪತಿಯವರು ಕವಿಯೇ ?’ ಎಂದು ಯಾರಾದರೂ ಕೇಳಿದರೆ, ಅವರಿಗೆ ದಯವಿಟ್ಟು * ಕೆಳಗಿನ ಸಾಲುಗಳ ಕಡೆಗೆ ಕಣ್ಣು ಹೊರಳಿಸಬೇಕೆಂದು ಬೇಡಿಕೊಳ್ಳುವೆ ಅಲ್ಲಿ ಕಂಡು ಬರುವ ಮೃದು ಮಧುರ ಪದವಿಲಾಸ, ರಮ್ಯ ಕಲ್ಪನಾ ವಿಲಾಸ, ಲಲಿತಭಾವ ಪ್ರಕಾಶ

---

೧) ರನ್ನವನೆ ಕೆತ್ತಿ ಹೊನ್ನಿನಲಿ ಬಿತ್ತಿ ಹಸಿರಲ್ಲಿ ಇಟ್ಟರಾರು ?
೨) ಹರಿದಿಹಳು ಭರದಿ ಹೆಬ್ಬಾವ ತೆರದಿ ತಿಳಿಮೊರೆಯ ರೂಪತಾಳಿ
ಪೆರ್ಬಂಡೆ ತಡೆಯೆ ಆರ್ಭಟಿಸಿ ನುಡಿಯೆ ನಡುಗಿಸುವ ರುದ್ರಕಾಳಿ
೩) ಹೊಳೆಯಲ್ಲಿ ಆನೆ ಬಿದ್ದಿಹವೊ ತಾನೆ ಎಂಬಂತೆ ತೋರ್ದಬಂಡೆ
೪) ಲತೆಯಾಗಿ ಬಾಗಿ ಜೊತೆಯಾಗಿ ಸಾಗಿ ಬಂದಿಹರು ನೀರಿಗಾಗಿ
೫) ಮಳೆಬಿಲ್ಲು ತೊಟ್ಟ ನಲ್ವೆಣ್ಣು ಕೊಟ್ಟ ಮುತ್ತನ್ನು ಸವಿಯುತಿಹುದು
೬) ಕತ್ತಲೆಯ ಮೇಲೆ ಇನಸೇನೆ ಪಾಲ ದಂಡೆತ್ತಿ ಹೋಪುತಿಹುದೊ
೭) ಹೊರಟಿರಲು ಗಾಡಿ ನಲಿಸಿದುವು ಹಾಡಿ ಹೋರಿಗಳ ಕೊರಳಗಂಟೆ
೮) ಬೆಳ್ಳಕ್ಕಿ ಮಾಲೆ ಹೊಂಗಿರಿಯ ಮೇಲೆ ಮಲ್ಲಿಗೆಯ ಮಾಲೆಯಂತೆ
೯) ನಿಂತಿರ್ದ ತೇರು ರಂಗುಟ್ಟ ಮೇರು
೧೦) ಸರಿದೋಡೆ ರಮಣಿ ನೆಗವಂತೆ ಹರಿಣಿ ಕಣ್ಬಲೆಗೆ ಸಿಕ್ಕದಂತೆ
೧೧) ಸುಳಿಸುಳಿವ ಅಲೆಯ ಕವಿಭಾವ ಬಲೆಯ ನೇಯ್ದಿರಲು ಕಾವ್ಯಕುಂಜ
೧೨) ಅಲೆಯಲೆಗೆ ಬಡಿದು ಮೈಮರೆದು ಕುಣಿದು ನುಡಿವಂತೆ ಜಲತರಂಗ
೧೩) ಪ್ರೇಮಿಗಳ ಮಿಲನ ಜಗಜೀವ ಚಲನ
೧೪) ತಿಳಿಚೆನ್ನ ಜೊನ್ನ ತುಂಬಿರಲು ತನ್ನ ಬೆಳ್ನೊರೆಯ ಸುತ್ತಸುರಿದು
೧೫) ನೀಳ್ಗಬ್ಬ ಹೊತ್ತು ರಸಿಕಂಗೆ ತುತ್ತು ತಂದಿದ್ದ ಚಲುವ ಬಾಲೆ
೧೬) ಅರಳುತ್ತಲಿಹುದು ಹೂವೊಂದು ಬಿರಿದು ಚಲು ಉಷೆಯ ಮುಗುಳಿನಂತೆ

ಈ ಮೊದಲಾದ ಕಾವ್ಯಗುಣಗಳು ಅವರು ನಿಶ್ಚಯವಾಗಿಯೂ ಕವಿಯೆಂದು ಕೃಯೆತ್ತಿ ಸಾರುತಿವೆ ಅವರ ಕಾವ್ಯ ದೇವಿಯೂ ಸಲ್ಲಲಿತ ಭಾಷಾಂಬರಧರಿಸಿ, ಮಲ್ಲಿಗೆಯ ಮುಗುಳುಗಳಲ್ಲಿ ಮೃದುಪದವಿರಿಸಿ, ಮುಂಮೇಲನೆ ಬಳುಕುತ್ತ ಬೆಳ್ಳಿನೋಟ ಹರಿಸಿ ಬರುವಂತೆ ಭಾಸವಾಗುತಿದೆ ಅವರು ಗಿರಿಯಾಗಿ ನಿಂತು ನೋಡಬೇಕೆನ್ನುತ್ತಾರೆ ತೊರೆಯಾಗಿ ಹರಿದು ಹಾಡಬೇಕೆನ್ನುತ್ತಾರೆ ಹಕ್ಕಿಯಾಗಿ ಹಾರಿ ಆಡಬೇಕೆನ್ನುತ್ತಾರೆ ಚುಕ್ಕಿಯಾಗಿ ಮುಗಿಲೇರಿ ನೋಡಬೇಕೆನ್ನುತ್ತಾರೆ ಇಷ್ಟೇ ಅಲ್ಲ ಜಗದ ದುಃಖ ಜೀವಾನುಭವದ ಕಡೆಗೂ ಅವರ ಕಾವ್ಯದೃಷ್ಟಿ ಹರಿದಿದೆ ಅಲ್ಲಿಯ ಅಟ್ಟಹಾಸ, ವಿಕಟ ಹಾಸಗಳನ್ನು ಗುರುತಿಸಿದ ಜನ್ಮಣ್ಣಾನಂದ ಇಹಪರದ ಹುಡಿಯ ನೆಲದಲ್ಲಿ ಕೂಡ ಗೋಳು ಎಂಬುದನ್ನು ಕಂಡಿದ ಅಲ್ಪದ ಬಗ್ಗೆ ಹೃಗುಗಳಿಂದ, ತೀಡುವ ತಂಗಾಳಿಯಿಂದ, ಕಂದನಿಗೆ ಮೊಲೆಯೂಡುವ ತಾಯಿಯಿಂದ, ಕೊಳದಲ್ಲಿ ನಲಿವ ತಾವರೆಯಿಂದ ಭೋರ್ಗರೆವ ಶರಧಿಯಿಂದ, ಗರಿ ಗೆದರಿ ಕುಣಿವ ನವಿಲಿನಿಂದ, ನಲ್ಲಗಾಗಿ ಪರಿತಪಿಸುವ ನಲ್ಲೆಯ ವಿರಹ ವ್ಯಸನಯಿಂದ, ತೊಳಗಿ ಬೆಳಗುವ ಶಶಿಸೂರ್ಯರಿಂದ ಬನಗಳಿಂದ, ಕಪ್ರ್ಯೋರ್ವಗಳಿಂದ ಅವರ ಕವಿತ ಸ್ಫೂರ್ತಿಯು ನಳಿಯನ್ನೂ ನೆಲೆಯನ್ನೂ ಪಡೆದಿದೆ

---

೧೭) ಗಿರಿಯಾಗಿ ನಾನು ತೊರೆಯಾಗಿ ತಾನು ಬಳಸುವಳ ಎನ್ನ ತರಳೆ

೧೮) ಹುಟ್ಟಲ್ಲ ಪ್ರೇಮ ಅಲ್ಲದಗಿ ಕಾಮ ಕೂಡಿಸುವುದು ತಿರುಗಿತಿರುಗಿ

೧೯) ಈ ಎಲ್ಲ ಲೋಕ ದಾನಾಗೆ ನಾಕ ಹೇಳೇಕ ಬೇಕು ಬನ್ನ!

೨೦) ಪಚ್ಚನೆಯ ಹಸರಲ್ಲ ಹಾಸಿರಲು ಮನೆತುಂಬ
ತೋರಣವ ಕಟ್ಟುವವು ಮಿಂಚು ನೋಡ

೨೧) ಮೃದುತರಯ ತಲ್ಪದಲಿ ಮಲಗಿರಲು ತಂಗಾಳಿ

೨೨) ನಲ್ಲೆಯಾ ಹೊಂಗೆನ್ನ ಪತ್ರದಲಿ ಬರೆಯುವನು
ಮುತ್ತಿನಾ ಅಕ್ಷರದಿ ‘ ನಾನು ಸೇತೆ ’

೨೩) ತುಂಬಿದ ಬಸಿರಿನ ಹೆಣ್ಣೊಲು ಹಸಿರು
ನಸುನಗೆ ಬೀರಿತ್ತು

೨೪) ಬೆಳ್ಳಿನೊರೆಯ ತೂರ್ವ ತೊರೆಯ
ದಿವ್ಯರಾಗ ಮಂಜುಳ

೨೫) ಒಡೆದ ಚೂರು ತೋರದಿರು
ನಿನ್ನ ರೂಪ ಸಾಸಿರ

" ರಸಾಕಾಂಕ್ಷಿ ರಸಿಕ ಋಷಿಯು
ಭವ್ಯ ನಿಧಿಯು ಈ ಸೃಷ್ಟಿ
ಕವಿಗೆ ನೀಡಿ ದಿವ್ಯ ದೃಷ್ಟಿ
ಸೃಷ್ಟಿಯೀ ತಪೋವನ "

ಎಂದು ಅವರೇ ಹೇಳುತ್ತಾರೆ

ಅವರ ಆಳವಾದ ಅಭ್ಯಾಸ, ಸೂಕ್ಷ್ಮನಿರೀಕ್ಷಣ, ಜಗತ್ಪ್ರಕೃತಿಗಳೊಡನೆ ಸಾಮರಸ್ಯ, ಅಗಾಧವಾದ ಅನುಭವ, ಉದಾತ್ತವಾದ ಅನುಭಾವ, ವಿಶಾಲ ಹೃದಯದ ದೃಷ್ಟಿ, ಉನ್ನತವಾದ ಭಾವಸೃಷ್ಟಿ ಎಲ್ಲವೂ ಕೂಡಿ ವಿಶ್ವದ ಎಲ್ಲ ಬದಿಗಳಿಂದ ಜೀವನದ ಅಂತರ್ಬಾಹ್ಯಗಳಿಂದ ಸತ್ವವನ್ನೂ, ತತ್ವವನ್ನೂ, ರಸವನ್ನೂ ಹೀರಿಕೊಂಡು ಮಿಂಚುವ ಅವರ ಕಾವ್ಯದೇವಿಯು ಸಾಕ್ಷಾತ್ಕಾರಕ್ಕೆ ಅಣಿಯಾಗಲಿ ಅವರ ಉಪಾಸನೆಯು ಬಲದಿಂದ ರವಿಕಳೆ ದಯ ಭಾವಸಾಮ್ರಾಜ್ಯದ ಒಳಗೂ ಹೊರಗೂ ಎಲ್ಲೆಲ್ಲೂ ಮುದಮುಂಬ ಒರಲಿ! ಆಗ ಜಗಕೆಲ್ಲ ಹೊಸ ಬೆಳಕು ತೋರಬೇಕೆಂಬ ಅವರ ಆಶೆ ಫಲಿಸದಿದ್ದೀತೇ? ಈ ಉಳಿವೆ "ಯ ಯಾತ್ರೆಯಿಂದ "ನೀನು ಕವಿಯಾಗಿ ಉಳಿವೆ" ಎಂದು ವಾಣಿ ಅವರನ್ನು ಆಶೀರ್ವದಿಸದಿಹಳೇ!

**ಬಾಸಬಾಗ**

ಮಂಗಳವಾರ
ಬನದ ಹುಣ್ಣಿಮೆಯ ಬೆಳದಿಂಗಳ ನಟ್ಟಿರುಳಲ್ಲಿ } **ಈಶ್ವರ ಮ ಸಣಕಲ್ಲ**
೨೨ನೆಯ ಜನವರಿ ೧೯೫೧

# ಮೊದಲ ನುಡಿ

ಮಗು ಕಣ್ಬಿಡುತ್ತಲೇ ಅಮ್ಮಾ ಎಂದು ರಾಗದಿಂದ ತಾಯಿಯನ್ನೂ ವಾಣಿಯನ್ನೂ ಒಟ್ಟಿಗೇ ನೆನೆದು ಹಾಡುವುದು. ಹಾಡುವಾಗ ಕಲವಲ ತಪ್ಪಲೂಬಹುದು. ಎನಿತು ತಪ್ಪಿದರೂ ಅವನು ವಾಣಿಯ ಮುದ್ದಿನ ಮಗು. ತಪ್ಪಿದಾಗ ತಾಯಿ ಮಗುವಿನ ಎಳೆ ಹೃದಯದಲ್ಲಿ ತನ್ನ ಹೃದಯದೊಂದು ಭಾಗವನ್ನು ಬಿಂಬಿಸಿ ಆದರಿಂದ ತಿದ್ದಿಸಿ ಕೇಳಿ ನಗುನಡೆಯುತ್ತಾಳೆ. ಮಗುವಿನ ನುಡಿ ಮೊದಲು ನುಡಿಸಿದಾದರೂ ತಾಯಿಗೆ ಮುದ್ದುನುಡಿ.

ನಾನಿನ್ನೂ ಸಾಹಿತ್ಯದಲ್ಲಿ ಅರಿಯದ ಮಗು. ತಾಯಿ ತಿದ್ದಿ ತೀಡಿ ಕಲಿಸಿ ಪರಿಪೂರ್ಣತೆಯ ಗುರಿ ತೋರಿಸುತ್ತಿದ್ದಾಳೆ. ತಾಯ ನುಡಿಯಂತೆ ಯಾತ್ರೆಯನ್ನು ಕೈಕೊಂಡಿದ್ದೇನೆ. ನಡೆವಾಗ ಎಡವಿರಬಹುದು. ಅದು ಸ್ವಾಭಾವಿಕ.

ನಾನು ಯಾವುದೂ ಗುರಿಯಿಲ್ಲದೆ ಏನನ್ನೋ ಬರೆದಾಗ ಅದಕ್ಕೊಂದು ಗುರಿ ತೋರಿದವರು ನನ್ನ ಹಿರಿಯ ಮಿತ್ರರೂ ಗುರುಗಳೂ ಆದ ಶ್ರೀ ಎಂ. ಅಕಬರ ಅಲಿಯವರು. ಅವರ ವಾತ್ಸಲ್ಯದ ನುಡಿಯಲ್ಲಿ ಬೆಳೆದ ನಾನು ಬರಿ 'ಖಣಿ'ಯೆಂದಿದ್ದೆ? ಹೇಳಲಾರೆ!

ಕನ್ನಡ ಕವಿಕುಲತಿಲಕರಾದ ಶ್ರೀ ಈಶ್ವರ ಸಣಕಲ್ಲರು ಕೇಳಿದೊಡನೆ ಮುನ್ನುಡಿ ಕೊಟ್ಟು ಯಾತ್ರೆ ಕೈಕೊಂಡ ನನ್ನನ್ನು ಹರಸಿದ್ದಾರೆ. ಪ್ರೊ. ಸಂಕಾಪುರ ಎಸ್. ಎಸ್. ತಮ್ಮ ಕೃಷ್ಣ ಮಾಲೆಯಲ್ಲಿ ಈ ಪುಷ್ಪವನ್ನು ಸೇರಿಸಿ ಕೊಂಡಿದ್ದಾರೆ. ಇವರೀರ್ವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆ ಸಲ್ಲಬೇಕು.

ನನಗೆ ಎಂದಿನಿಂದಲೂ ಹುರುಪು ಹುಮ್ಮಸ್ಸು ನೀಡಿ ಎಲ್ಲ ಕಾರ್ಯಗಳಲ್ಲಿಯೂ ಜತೆಯನ್ನಾಗಿ ಕೊಟ್ಟ ಗೆಳೆಯ ವೀರಭದ್ರನನ್ನು ಮರೆಯುವದು ಸಾಧ್ಯವೇ ಇಲ್ಲ. ಈ ಪುಸ್ತಕ ಪರಿಷ್ಕರಣದ ಕಾರ್ಯದಲ್ಲಿ ನೆರವಾದ ಎಲ್ಲ ಮಿತ್ರರಿಗೂ, ಮುಖ್ಯವಾಗಿ ಶಿಕ್ಷಕ ಸಂಗಮನಾಥನಿಗೂ ಹಸ್ತಪ್ರತಿ ತಯಾರಿಸಿಕೊಟ್ಟ ಸೋದರ ಕುಸುಮ ಬೆಳಗಿಯವರಿಗೂ ನನ್ನ ವಂದನೆಗಳು ಸಲ್ಲಬೇಕು.

ಮುಖಚಿತ್ರದ ಬ್ಲಾಕನ್ನು ಬೇಡಿದೊಡನೆ ಕೊಟ್ಟ ಡಾ|| ಕರ್ಜಿಯವರಿಗೂ, ಶ್ರೀ ಅಲ್ಲಪ್ಪ ಮುದ್ದಾರ ಅವರಿಗೂ, ಕಲಾವಿದ ಎಂ. ಎ. ಅಕಬರ ಅಲಿಯವರಿಗೂ ನಾನು ಚಿರಋಣಿ. ಇನ್ನು ಸುಂದರವಾಗಿ ಅಚ್ಚುಗೊಳಿಸಿದವರನ್ನು ಮರೆತೇನೇ?

**ಬೆಳಗಾವಿ** **ಪಶುಪತಿ**

೩ನೆಯ ಫೆಬ್ರುವರಿ ೧೯೫೧

# ಪ್ರಕಾಶಕರ ಮಾತು

' ಯಾತ್ರಿ ' ಶೋಭಾ ಗ್ರಂಥಮಾಲೆಯ ಬಿಡಿಮೊಗ್ಗಾಗಿ ಹೊರಬಂದಿವೆ ಶ್ರೀ ಪಶುಪತಿ ಅವರು ನನ್ನ ನೆಚ್ಚಿನ ವಿದ್ಯಾರ್ಥಿಗಳಲ್ಲೊಬ್ಬರು ಅವರ ಒರೆ ಹೆಗಳನ್ನು ಆಗಾಗ್ಗೆ ಓದಿ ಆನಂದಪಟ್ಟಿದ್ದೇನೆ ತಮ್ಮ ಮೊದಲನೆಯ ಕೃತಿ ಯನ್ನು ನಮ್ಮ ಮಾಲೆಯಲ್ಲಿಯೇ ಸೇರಿಸಲು ಇಚ್ಛಿಸಿದರು ನಾನೂ ಸಂತೋಷದಿಂದ ಒಪ್ಪಿಕೊಂಡೆ ಸಾಹಿತ್ಯದ ಬೆಳವಣಿಗೆಗೆ ಮಾಲೆ ಅಡ್ಡ ಬರಬೇಕೆ ?

ಶ್ರೀ ' ಪಶುಪತಿ ' ಅವರು ಇನ್ನೂ ಸಣ್ಣವರು ಈಗಾಗಲೇ ಸಾಹಿತ್ಯ ಸೇವೆ ಕೈಕೊಂಡುದು ಶುಭದ ಚಿಹ್ನೆ ಬೆಳೆಯ ಸಿರಿಯನ್ನು ಮೊಳಕೆಯಲ್ಲಿ ಕಾಣು ಎಂಬಿದೆ ಅಂತಹ ಕಾವ್ಯಶಕ್ತಿ ಅವರಲ್ಲಿದೆಯೆನ್ನುವುದನ್ನು ಯಾರೂ ಅಲ್ಲಗಳೆಯಲಾರರು

ಹಲವಾರು ತಪ್ಪಿದ್ದರೂ ಅದೊಂದು ಕಾವ್ಯ ಹಿರಿಯರೇ ಹೊರಗೆ ಬರಬೇಕು, ಕಿರಿಯರೆಲ್ಲ ತೆರೆಯಮರೆಯಲ್ಲಿಯೇ ಇರಬೇಕೆಂದು ಯಾರು ಹೇಳಿಯಾರು ? ಆ ರೀತಿಯಿಂದ ' ಯಾತ್ರಿ ' ಹೊರಬಂದಿದೆ ಸಹೃದಯರು ಸಹಾನುಭೂತಿಯಿಂದ ಸ್ವೀಕರಿಸಿ ಪ್ರೋತ್ಸಾಹಿಸುವರೆಂದು ನಂಬಿದ್ದೇವೆ

ಪ್ರಕಾಶಕರು.

ಜೀವನದ ಯಾತ್ರೆಯ ಜನಜಂಗುಳಿಯಲ್ಲಿ

ದೆ ಸೆ ಗಾ ಣ ದ ಲೆ ವಾ ಗ

ಕೈದಡವಿ ಪೊರೆದ

## ಮರಿತಮ್ಮಪ್ಪನವರು ಡಬಾಲಿ

## ಅವರಿಗೆ—

# ಪರಿವಿಡಿ

# ಯಾತ್ರೆ

ಕವಿದಿತ್ತು ಇರುಳು ಮನವೆಲ್ಲ ಮರುಳು ಏನೊಂದು ತಿಳಿಯದಂತೆ
ಬೀಸಿರಲು ಮಂಜು ಹರಡಿರಲು ನಂಜು ದಶದಿಕ್ಕು ಅರಿಯದಂತೆ
ಯಾತ್ರೆಗೆಯೆ ಎಂದು ಹೊರಟಿರ್ದೆನಂದು ತಾಯ್ಮಡಿಲಿನಲ್ಲಿ ಮಲಗಿ
ಹೊಂಗಿರಣವೆಂದು ಬೆಳಗುವುದೊ ಎಂದು ತಳಮಳಿಸುತಿದ್ದೆ ಮರುಗಿ

ಆತುರದಿ ನೆರಗು ಪಿಡಿದೆಳೆದು ಕೇಳೆ ಬೆಳಕೆಂದು ಬಪ್ಪುದೆಂದು ?
" ಇನ್ನಷ್ಟು ಸಾರಿ ಮುಂದರಿಯೆ ಏರಿ ಬರುವುದೋ ಬೆಳಗಲೆಂದು "
ಬರುವನಕ ಇಂತು ಅಂಧತೆಯೊಳಿಂತು ಮಲಗಿರಲಿ ಅಮ್ಮ ನಾನು ?
ಇನ್ನಿಷ್ಟು ದಾರಿ ನಾಗಲಿಕೆ ಭಾರಿ ವರುಷಗಳೆ ಬೇಕೊ ಏನು?

ಜೀವನದ ಯಾತ್ರೆ ಜಗಕೆಲ್ಲ ಜಾತ್ರೆ ಜನಕೊಂದು ಹಬ್ಬದೂಟ
ಆ ಒಂದು ನಿಮಿಷ ಮನಕೆಲ್ಲ ಹರುಷ ರಸಿಕಂಗೆ ರಸದ ಊಟ
ನಿಬ್ಬಣದ ಮಾಟ ಏನೆಂಥ ಆಟ ಕಣ್ಮನಕೆ ನರನ ನೋಟ
ಅಮೃತವು ಕಿವಿಗೆ ವರ್ಣನೆಯು ನವಿಗೆ ಹೃದಯಕ್ಕೆ ಆಯ್ತೊ ಮಾಟ

ಹೂ ಬಳ್ಳಿ ಸರಿಸಿ ಧಾರ್ವಾಡ ಮರೆಸಿ ಹಬ್ಬಿತ್ತೊ ತಾಯ ನೋಟ
ನೇಸರನ ಕಿರಣ ತೊಡಿಸಿದಾಭರಣದಿಂದೊಪ್ಪುತಿರ್ದ ಮಾಟ
ಅಂಧತೆಯು ಹರಿದು ತಮವೆಲ್ಲ ಸರಿದು ತುಂಬಿತೋ ಬೆಳಗೊಬೆಳಗು
ಚಿಮ್ಮಿರಲು ಬೆಳಕು ಹೊರಜಗಕೆ ಥಳಕು ಎದೆಗೆಲ್ಲ ಆಯ್ತೊ ಬೆಳಗು

ಆ ಬೆಳಕು ಚಿಮ್ಮೆ ನವರಸವು ಹೊಮ್ಮೆ ಮರುಳಾಗಿ ನಾನು ನಿಂದೆ
ತನಿರಸವ ಹೀರಿ ಎದೆಹಕ್ಕಿ ಹಾರಿ ಬೆಳಗಿನಲಿ ಲೀನನಾದೆ
ನೊರೆದುಂಬಿ ಬಂದ ಬೆಳಗಿನಗೆ ತಂದ ಸೊಬಗನ್ನು ಹಾಡಲೇನು?
ದನಿಯೆತ್ತಿ ನೊಗವು ಹಾಳೆನ್ನೆ ಮನವು ತಿರಿಮಾನ ತಕ್ಕುದೇನು?

ಎದುರಿದ್ದ ಗಿರಿಯ ನಾಲೆಲ್ಲ ಸುಧೆಯ ಸವಿಯುವುದ ಕಾಣಲಾಗ
ಗಿರಿಯಾಗಲೆಂದು ಬಯಸಿದೆನು ಅಂದು ರಸಧಾರೆ ಸುರಿಯುವಾಗ
ಗಿರಿಯಾಗಿ ನಿಂತು ಅನುದಿನವು ಇಂತು ರಸವೀಂಟಲೆನಿತು ಚೆನ್ನ
ಈ ಎಲ್ಲ ಲೋಕ ತಾನಾಗೆ ನಾಕ ಹೇಳಿಕೆ ಬೇಕು ಚಿನ್ನ

ಜಗದಿರುಳ ನೆರಗು ಸರಿಸುತ್ತ ಮೆರಗು ಬೀರುತ್ತ ಕುಣಿದು ರಾಣಿ
ಪನ್ನೀರ ಸಿಡಿಸಿ ಕೆನ್ನೀರ ಕುಡಿಸಿ ಬರುತಿರಲು ಉಷೆಯ ರಾಣಿ
ಚೆಲ್ಮೊಗ್ಗೆ ಬಿರಿದು ಸೌರಭವ ಸುರಿದು ಮಂಗಳವ ಸಾರುತಿತ್ತು
ಉಷೆನುಗುಳ ತೆರದಿ ಬಿರಿದರಳು ಬಿಸದಿ ಸುರಿದಿಹವು ಸುತ್ತುಮುತ್ತು

ರನ್ನವನೆ ಕೆತ್ತಿ ಹೊನ್ನಿನಲಿ ಬಿತ್ತಿ ಹಸಿರಲ್ಲಿ ಇಟ್ಟರಾರು?
ಬೂತಾಯ ನೊಸಲ ಮಧ್ಯದಲಿ ಕುಶಲ ಕುಂದಣವನಿಟ್ಟರಾರು?
ಹಸಿರುಡಿಗೆಯುಡಿಸಿ ಹೊನ್ನೊಡವೆ ತೊಡಿಸಿ ಕುಣಿಸಿವರು ಯಾರು ಯಾರು?
ನೇಸರನನುಳಿಪು ಆಗಸದಿ ಹೊಳೆದು ಲೀಲೆಯನು ತೋರ್ವರಾರು?

ತಮ್ಮನಿಯ ಕೊರಳ ಸರದಿಂದೆ ಸರಳ ರಾಗದಲಿ ಹಾಡೆ ಹಕ್ಕಿ
ಎದೆಯಾಳದಲ್ಲಿ ಅಮೃತವು ಚೆಲ್ಲಿ ಚಿಮ್ಮಿತ್ತು ಉಕ್ಕಿ ಉಕ್ಕಿ
ಮನವಾಗೆ ಹಕ್ಕಿ ತನುವಾಗೆ ರೆಕ್ಕೆ ಹಾರಲ್ಕೆ ನಭಕೆ ಏರಿ
ಮರೆಯಲಿಕ ಜಗನ ಸವಿಯಲಿಕೆ ನೊಗವ ಆದಿವ್ಯ ಸಗ್ಗನಾರಿ

## ಯಾತ್ರಿ

ಸವಿಗಾನ ತುಂಬಿ ಹಾಡುತ್ತ ತುಂಬಿ ಝೇಂಕರಿಸೆ ಹೂವ ಮುತ್ತಿ
ಕೊಂಡೊಯ್ಯಿತೆನ್ನ ಎದೆಪುಷ್ಪವನ್ನ ನೆರೆಗೈದು ಸುತ್ತಿ ಸುತ್ತಿ
ಅಲ್ಲೊಂದು ನೋಟ ಇಲ್ಲೊಂದು ಮಾಟ ಅರಳಿರ್ದ ಹೂವಿನಾಟ
ತಿಳಿರಂಗ ಪೆಂಪು ವಾಸನೆಯ ಕಂಪು ಕಣ್ಮನಕೆ ಸಗ್ಗದೂಟ

ಮೆಲುಗಾಳ್ಗೆ ತೂಗಿ ಹೂಬಳ್ಳಿ ಬಾಗಿ ಕರೆದಿತ್ತು ಬಳಿಗೆ ಎನ್ನ
ತರುವಾಗಿ ನಿಂತು ಜಗದಾಟ ಮರೆತು ನಲಿಯುವುದು ಎನಿತು ಚೆನ್ನ
ಅನ್ನದಾ ಚಿಂತೆ ಚಿನ್ನದಾ ಚಿಂತೆ ಏನಿಲ್ಲ ಸತ್ಯ ಜಗದಿ
ಸಾಲಿಗರ ಹಂಗೆ ತಾನಿಲ್ಲ ನರಗೆ ಈ ನಿತ್ಯ ಸಿರಿಯ ವನದಿ

ಹಳಿಯಾಳ ದಾಟಿ ದಾಂಡೇಲಿ ಮುಟ್ಟಿ ಹರಿದಿಹಳು ದಿವ್ಯ ಕಾಳಿ
ಗಿರಿಯಿಂದ ಹೊಮ್ಮಿ ಗವಿಯಿಂದ ಚಿಮ್ಮಿ ಬಯಲಲ್ಲಿ ಇಳಿದ ಕಾಳಿ
ಹರಿದಿಹಳು ಭರದಿ ಹೆಬ್ಬಾವ ತೆರದಿ ತಿಳಿದೊರೆಯ ರೂಪ ತಾಳಿ
ಪೆರ್ಬಂಡೆ ತಡೆಯೆ ಆರ್ಭಟಿಸಿ ನುಡಿಯೆ ನಡುಗಿಸುವ ರುದ್ರಕಾಳಿ

ಜೋಗುಳವ ಹಾಡಿ ಸಸಿಗುಸಿರ ನೀಡಿ ತಾಯಾಗಿ ಸುತ್ತ ವನಕೆ
ಕಂದಿರದಿ ನಿಂದು ಕಾಯ್ದವಳೊ ಇಂದು ಹಾಲ್ನೀಡೆ ವನ್ಯಮೃಗಕೆ
ಸಾಗರವ ಸೇರೆ ಜಗಕಲ್ಲ ಬೇರೆ ತನ್ನಂತೆ ಸಾಗಿರೆಂದು
ಹೇಳಲ್ಕೆ ಏನೊ ಸಾಗಿಹಳೊ ಕಾಣೆ ಬಯಲಲ್ಲಿ ಮುಂದು ಮುಂದು

ಹೊಳೆಯಲ್ಲಿ ತಾನೆ ಬಿದ್ದಿಹವೊ ಆನೆ ಎಂಬಂತೆ ತೋರ್ದಬಂಡೆ
ಜಲಕನ್ಯೆ ಕೂಡಿ ತೆರೆಯೊಡನೆ ಆಡಿ ನಲಿಯುವುದ ಮುದದಿ ಕಂಡೆ
ತೆರೆ ತೆರೆಗೆ ಬಡಿದು ನೀರಂಬು ನೆಗೆದು ನರ್ತಿಸಲು ಹರುಷವಾಂತೆ
ಪ್ರೇಮಿಗಳ ತೆರದಿ ತಮ್ಮನಿಯ ರವದಿ ಹಾಡಿಹರು ಪ್ರೇಮಗೀತೆ

ಲತೆಯಾಗಿ ಬಾಗಿ ಜೊತೆಯಾಗಿ ಸಾಗಿ ಬಂದಿಹರು ನೀರಿಗಾಗಿ
ಗೋಪಿಕೆಯರಿವರೊ ಹಾಲ್ಮೊಸರಿನವರೊ ಕಾದಿಹರೊ ಕೃಷ್ಣಗಾಗಿ
ರಾಧೆಯೋ ಅವಳು ರುಕ್ಮಿಣಿಯೊ ಇವಳು ಹೊರಗಣ್ಗೆ ಕಾಣದವರು
ಗೋವಳನ ತೆರದೆ ಕೊಳಲನ್ನು ಊದೆ ಒಳಗಣ್ಗೆ ಕಾಣುವವರು

ಅರೆಯಾಗಿ ಮಿಂದ ದಂಡೆಯುಲಿ ನಿಂದ ಚೆಲುವೆಯರು ಕಣ್ಣು ತಣಿಸಿ
ಕಲಕಲವ ತುಂಬಿ ಯಮುನೆಯನು ಬಿಂಬಿಸಿಹರಿಲ್ಲಿ ನೊಬಗನುಣಿಸಿ
ಹೊಳೆಯಲ್ಲಿ ನಿಂದ ಚೆಲುವಿನಲಿ ಮಿಂದ ಗೋಪಿಯರ ಅಂದದಿಂದ
ಮೆಲುಗಾಲಿ ತಾಗಿ ತೆಳುವನಸಪಲುಗಿ ಕೃಷ್ಣನ್ನ ನೆನೆಯುವಂದ

ದಂಡೆಯುಲಿ ಮಧುರ ಬನವಿಹುದು ಚದುರ ಅರೆಚಣವೆ ಇಲ್ಲಿ ನಿಲ್ಲು
ತೆಂಗಿನಾ ಮರದ ಕೌಂಗಿನಾ ಮರದ ಆಹ್ವಾನ ಕೇಳು–ಸೊಲ್ಲು
ತಲೆವಾಗಿ ಈಯುಲೆಳೆ–ನೀರ ಕಾಯ ಮನವಾರೆ ಹೀರು ಎಂದು
ಚಾಮರವ ಬೀಸಿ ದಣಿವೆಲ್ಲ ಮರಸಿ ನಿನಗ್ಹುರುಷ ನೀಡಲೆಂದು

ಕಾಳಿಯುಲಿ ಮುಳುಗೆ ಕೇಳಿಯುಲಿ ತೊಡಗೆ ಎದೆಗೆನಿತು ತುಂಬ ಹರ್ಷ
ಮನವಾರೆ ಮಿಂದ ಬಿಸಿಲಲ್ಲಿ ನಿಂದ ಮನಸಸಿಗೆ ದಿವ್ಯವರ್ಷ
ಹೊಳೆಯಾಗಿ ಹಾಡಿ ಬನದೊಡನೆ ಆಡಿ ಆ ಜಲಧಿ ನಾರಲೆಂದೆ
ಉಗಿಯಾಗಿ ಹಾರಿ ತಿಳಿ ನೀಲಕೇರಿ ಸುರಲೋಕ ಸೇರಲೆಂದೆ

ದಂಡೆಯುಲಿ ನಿಂದ ತರುವೊಂದರಿಂದ ಕೇಳ್ಬರುವ ರವವ ಕೇಳು
ಸವಿಗೊರಲಿನಿಂದ ಮನವೊಲಿಸ ಬಂದ ಅಪ್ಸರೆಯೊ ಕಾಣೆ ಅವಳು
ಬಿದಿರುದರದಿಂದ ಮುದಮುಂಬಿ ತಂದ ಇದು ಆರ ಇಂಪು ಗಾನ ?
ವನವೆಲ್ಲ ಕುಣಿಸೆ ಜಗವೆಲ್ಲ ತಣಿಸೆ ಗೊಲ್ಲನಾ ವೇಣುಗಾನ !

ಮಲ್ಲಿಗೆಯ ಬಳ್ಳಿ ಬಳುಕುತ್ತಿ ಮಳ್ಳಿ ಕರೆದಿಹಳು ಕೈಯ ಬೀಸಿ
ಸೌರಭವ ಸೂಸಿ ಮನ ಮರುಳುಗೊಳಿಸಿ ಸುತ್ತೆಲ್ಲ ಹೂವ ಹಾಸಿ
ಆ ಚಲುವೆ ಕರೆಯೆ ರಸಪಾನ ನೀಯೆ ಓಗೊಡದ ರಸಿಕರುಂಟೆ?
ಸಗ್ಗವನು ಕೊಚ್ಚುವಾ ಇನಿಯ ಹುಚ್ಚು ಹೊಳೆಯಲ್ಲಿ ತೇಲದುಂಟೆ?

ಅರೆನಿಮಿಷಕಾಲ ಬೀಸಿದ ಜಾಲ ನೀಡಿರ್ಪ ಸೊಬಗದೇನು!
ಇಡಿವರುಷವೆಲ್ಲ ತಪಗೈಯ್ಯಲಿಲ್ಲಿ ಆ ಸಗ್ಗ ಮೂರೆ ಗೇಣು!
ಮನಕೊಂದು ಬಯಕೆ ದಿನಕೊಂದು ಬಯಕೆ ಎದೆಯಾಳದಾಸೆಯಂತೆ
ಚಿರರೂಪ ವಿರದ ಆಗಸದಿ ನೆರೆದ ಹಲವಿಧದ ಮೋಡದಂತೆ!

ಸೌಂದರ್ಯಕೊಂದು ರಕ್ಷಣೆಯು ಎಂದು ಕಟ್ಟಿಹನೊ ಕೋಟೆಯನ್ನು
ದಶ ದಿಕ್ಕು ಗೆಲ್ದ ನೆನಪಿಂಗೆ ಎಂದು ದಿಗ್ವಿಜಯ ಕಂಭವನ್ನು
ಮೇಘವನು ಎತ್ತಿ ಚೆಲುಸಿರಕೆ ಸುತ್ತಿ ಮುಮುವಣಿಗನಾಗಿ ಚಾಚಿದು
ಮಳೆಬಿಲ್ಲ ತೊಟ್ಟು ಸಪ್ತಿಣ್ಣ ಕೊಟ್ಟು ಮುತ್ತನ್ನು ಸವಿಯುತಿಹುದು

ಮಳೆ ಬಿದ್ದರೇನು ಸಿಡಿಲೆರಗಲೇನು ಎನಲ್ಲ ಸಹಿಸಿ ನಿಂದು
ಮಳೆಯನ್ನು ಕುಡಿದು ಸಿಡಿಲನ್ನು ಹಿಡಿದು ಕುಣಿಸಿಹುದು ಹಿಂದು ಮುಂದು
ಕರೆದಿತ್ತು ದಾರಿ ಗಿರಿ ಶಿಖರವೇರಿ ಕೈಲಾಸ ತೋರ್ಪೆನೆಂದು
ಉರುಳಿದುವು ಗಾಲಿ ಲೀಲೆಯಲಿ ತೇಲಿ ಕರೆದತ್ತ ದಾರಿ ಅಂದು

ತೇಲುತ್ತಿ ಮೇಘ ತಮ್ಮಾಟಮೋಘ ಎಳೆರವಿಯ ಹೊನ್ನಕರದಿ
ಹೊನ್ನುಡುಗ ಧರಿಸಿ ನವವೇಷ ಮೆರೆಸಿ ತೋರಿಹವು ನೀಲ ನಭದಿ
ಕತ್ತಲೆಯ ಮೇಲೆ ಇನಸೇನೆ ಪಾಳೆ ದಂಡೆತ್ತಿ ಹೋಹುತಿಹುದೊ?
ಗಜ ತುರಗ ರಥವು ನಾಗಿರಲು ಜಗವು ಕೆಂಧೂಳಿಲಡಗುತಿಹುದೊ!

ಒಂದೊಂದು ಗಿರಿಯು ಮತ್ತೊಂದು ತೊರೆಯು ಎಂಬಂತೆ ತುಂಬುತಿರಲು
ಆರೆ ನಿಮಿಷದಲ್ಲು ಕಾಣವೋ ಎಲ್ಲು ಬರಿವ್ಯೋಮ ತೋರುತಿರಲು
ಕಾಯುರಳಿಯೊಡೆದು ಈ ಚಣದಿ ಪುಟಿದು ಹಿಂಜಿರ್ದ ಅರಳೆ ಹರಹಿ
ಸಿಗದಾಗೆ ಉಷೆಯು ಅವಳರುಣ ನೆಳಿಯುತಿಹನೇನೊ ನೆರಗ ಕೊಡಹಿ

ಹಿಂದಾಯ್ತು ಕಾಳಿ ಬಹುರೂಪ ತಾಳಿ ಎದೆಯಲ್ಲಿ ನೊರೆಯುತಿಹುದು
ಮನವನ್ನು ಸೆಳೆದು ಜಲದಲ್ಲಿ ಇಳಿದು ಚೆಲ್ಲಾಟಕೆಳಸುತಿಹುದು
ಹೊರಟಿರಲು ಗಾಡಿ ನಲಿಸಿದುವು ಹಾಡಿ ಹೋರಿಗಳ ಕೊರಳ ಗಂಟೆ
ಮುಂದುರುಳಿ ಗಾಲಿ ಮನ ಮತ್ತೆ ತೇಲಿ ಹೊಳೆ ದಂಡೆ ಬಯಸದುಂಟೆ!

ಬನದೇವಿ ಯಾತ್ರೆ ಸಾಗಿಹುದು ಇಲ್ಲಿ ಗಿರಿಯಾಗೆ ಪಕ್ಕ ತೇರು
ಸಾಲಿಟ್ಟು ನಡೆವ ಜಯಘೋಷ ನುಡಿವ ಪಯಣಿಗರೆ ಎಳೆಯುವವರು
ಬಳಲಿರ್ದ ಜನಕೆ ಹಸಿದಿರ್ದ ಮನಕೆ ಬೇಡಿಪುದ ನೀಡಲೆಂದು
ಕಿನ್ನರಿಯ ಬೊಮ್ಮ ಹರಿದಿಹನು ಬ್ರಹ್ಮಸಾಂಗತಿಯ ನಡೆಸಲೆಂದು

ತಂಗಾಳಿ ತೀಡಿ ಸವಿಹಾಡ ಹಾಡಿ ಪಯಣಿಗರ ಕುಣಿಸಲೆಂದು
ತರುತಂತಿ ಮೀಂಟಿ ಹಾಡಿರ್ದ ಧಾಟಿ ನಂಜೆಯುಸು ತೋರಿತಂದು
ಹೊಂದೇರನೇರಿ ಸಾಗಿಹನು ತೂರಿ ನೇಸರನು ರನ್ನ ಮಾಲ
ಶುಕ ಪಿಕಗಳುಲಿವು ತಂಗಾಳಿ ನಲಿವು ತುಂಬಿಹುದು ಗಿರಿಯ ಮೇಲೆ

ಹೆಜ್ಜೆಯನು ಕುಣಿಸಿ ಗೆಜ್ಜೆಯನು ನುಡಿಸಿ ಬರುತಿಹಳೊ ನಿಶಿಯರಾಣಿ
ಕಾಯ್ದಿರ್ದ ಖಗಕೆ ಕತ್ತಲೆಯ ಮೃಗಕೆ ತಲುಪಿಸಲು ತೂಯ-ವಾಣಿ
ಬೆಳ್ಳಕ್ಕಿ ಮಾಲೆ ಹೊಂಬಾನಮೇಲೆ ಮಲ್ಲಿಗೆಯ ಮಾಲೆಯಂತೆ
ನೇಸರನ ನಿಂದು ಬೀಳ್ಕೊಳ್ಳಲೆಂದು ಆಗಸವನಿ ಜಿ ಒಂತೆ!

ಮೂಡಲದ ಗಿರಿಯ ಪಚ್ಚನೆಯ ಗುಡಿಯ ಹೊಂಗಳಸ ಮಿಂಚುವಂತೆ
ನಾರಿದನು ಚಂದ್ರ ಇರುಳರಸಿಯಿಂದ್ರ ಪ್ರೇಯಸಿಯನರಸುವಂತೆ
ಚಂದಿರನ ಕಂಡು ಚೇಂಪಕ್ಕಿ ಹಿಂಡು ಕುಣಿದಿತ್ತು ಹರುಷ ತುಂಬಿ
ತಿಳಿಬಾನನೇರಿ ಚಂದಿರನ ಸೇರಿ ಜ್ಯೋತ್ಸ್ನೆಯ ಸೊಗವ ತುಂಬಿ

ಮಲ್ಲಿಗೆಯ ಹೂವ ಶಯ್ಯೆಯಲಿ ನಲಿವ ಚಂದಿರನ ಅಂದ ಕಂಡು
ಕುಡಿ ಮಿಂಚ ತುಳುಕಿ ತಾರೆಯರು ಬಳುಕಿ ತಮ್ಮೆಡೆಗೆ ನಾರಲೆಂದು
ನವ್ಮೋಹ ಬೀಸಿ ಸಹವಾಸ ಬಯಸಿ ಕರೆಯುವುದ ಕಂಡ ಜಲಧಿ
ಬಂದಿಹಳು ನೋಡ ತಳು ಬಿಳಿಯ ಮೋಡ ರೂಪದಲಿ ಬಳಿಗೆ ಕೆಳದಿ

ಹಗಲೆಲ್ಲ ಮಧಿಸಿ ಚಣಚ[illegible] ತಿಸಿ ತಂದಿಹನು ಸಗ್ಗಸುಧೆಯ
ಬೆಳ್ನೊರೆಯ ಸೂಸಿ ಬಯಲೆಲ್ಲ ಈಸಿ ನಾರಿಹನು ಬಾನಿನೆದೆಯ
ಕೈಜಾರಿ ಬಿತ್ತು ಇಳೆಗೆಲ್ಲ ಸುತ್ತು ಚಂದಿರನ ಕೈಯ್ಯ ತುತ್ತು
ಆವರಿಸ ಭರದಿ ನೊರೆ ಹಾಲ ತೆರದಿ ತಿಳಿಜೊನ್ನ ಸುತ್ತು ಮುತ್ತು

ಕಂದಿಹನು ಚಂದ್ರ ಚೆಲುವಿಕೆಯ ಇಂದ್ರ ಕಳೆದಿರಲು ತನ್ನ ಸೊತ್ತು
ಮನದನ್ನೆಗೆಂದು ತಂದಿರಲು ಅಂದು ಪ್ರೀತಿಯಲಿ ಸುಧೆಯ ಹೊತ್ತು
ಚೇಂವಕ್ಕಿ ಹೀರಿ ಸಾರಿದವು ಹಾರಿ ಚಂದಿರಗೆ ಕೇಳುವಂತೆ
ನೀ ತಂದುದನ್ನು ಬಿಡಲಾರೆವಿನ್ನು ಒಂದ್ಹನಿಯು ಉಳಿಯದಂತೆ

ಇರುಳೆಲ್ಲ ಅಳಲಿ ಚಂದಿರನು ಬಳಲಿ ಹೊರಟಿಹನು ತಾಯಿಯೆಡೆಗೆ
ತನ್ನೆಲ್ಲ ಸೊತ್ತು ಹೋಯ್ತೆಂದು ಅತ್ತು ಕಂಬನಿಯ ಮಿಡಿದು ಕೊನೆಗೆ
ಕಂಬನಿಯ ಮುತ್ತು ಉದುರಿರಲು ಸುತ್ತು ಹಚ್ಚನೆಯ ಹಸಲೆಯಲ್ಲಿ
ಹನಿಯಾಗಿ ನಿಂದು ಅಶ್ವತ್ಥದ ಬಿಂದು ತೊಳತೊಳಗೆ ಬೆಳಗಿನಲ್ಲಿ

ಒಂದಿರಲು ಜಾಣಿ ಮುಂಬೆಳಗ ರಾಣಿ ಮುತ್ತರಸುವಾಸೆಯಿಂದ
ಹರ್ಷದಲಿ ಮಿಂದ ವದನಾರವಿಂದ ಕೆಂಪಡರಿ ಎನಿತು ಚೆಂದ
ಆಯ್ತೇನೊ ಲಜ್ಜೆ ಹೆಜ್ಜೆಯಣಗೆಜ್ಜೆ ನುಡಿಸುತ್ತ ಸಾಗುತಿಹಳು
ಸಿಗಲಿಲ್ಲ ಮುತ್ತು ಹಸಿರಲ್ಲಿ ಬಿತ್ತು ಅವಳೆರುಣ ಸಾರುತಿರಲು

ನೇಸರನು ಸಾರಿ ಹೊಂಗಿರಣತೂರಿ ನಗುತಿರಲು ಹೆಮ್ಮೆಯಿಂದ
ಅಲ್ಲೊಬ್ಬ ಇನನು ಮಿಂಚುತ್ತಲಿಹನು ನೇಸರನ ಎದುರಿನಿಂದ
ಮರಿಸೂರ್ಯನೇನೊ ಹೊಳೆವಗ್ನಿಯೇನೊ ತಿಳಿಯದಲೆ ಮೂಢನಾಗಿ
ಸಾಗಿರಲು ವನಕೆ ಸೊಬಗುಣಿಸ ಬನಕೆ ಇಟ್ಟಿರ್ದ ಕಳಸ ಬೆಳಗಿ

ಸೌಂದರ್ಯಕೊಂದು ಹೊಂಗಳಸವೆಂದು ಕಣ್ಣಾರಳಿಸೀಕ್ಷಿಸಿರ್ದೆ
ಚಕ್ಕಿರಿಯ ಮೇಲೆ ಹೊಂಗಳಸ ಲೀಲೆ ಕಾತರಿಪ ಮನಕ ತೋರ್ದೆ
ಚಿನ್ನನಾ ಗುಡಿಯು ಹೊನ್ನಿನಾ ಗುಡಿಯು ಹಸಿರಿಂದ ಹೊರಗೆ ತೋರೆ
ಕುಣಿದಿತ್ತು ಮನವು ಹರುಷದಲಿ ತನುವು ಹರ್ಷಾಶ್ರು ಮೇರೆ ಮೀರ

ಸಾಲಾಗಿನಿಂದ ಅಂಗಡಿಯ ಅಂದ ಹೃದಯವನು ಸೆಳೆಯುತಿರಲು
ನಿಂತಿರ್ದ ತೇರು ರಂಗುಟ್ಟು ಮೇರು ತೆರ ತೆರದಿ ಮೆರೆಯುತಿರಲು
ಮಹಾದ್ವಾರದೆದುರು ಸಾಧುಗಳ ಸದರು ನಾಲೆರಡು ತುಂಬಿನಿಂದು
ಕೂಡಿರ್ದ ಜನಕೆ ಪಾಮರರ ಮನಕೆ ಪಾವಿತ್ರ್ಯ ಬೀರಲೆಂದು

ಅಲ್ಲೋರ್ವ ಸಾಧು ಇಲ್ಲೋರ್ವ ಸಾಧು ಹೊಳೆವಗ್ನಿ ಕುಂಡದಲ್ಲಿ
ನಡೆಸಿಹರು ಹೋಮ ಸುಡಲೆಂದು ಕಾಮ-ಕ್ರೋಧಗಳ ಕಾಷ್ಠ ಚೆಲ್ಲಿ
ಮಹಾದ್ವಾರದಾಟಿ ಬಿಕ್ಷುಗಣ ಕೋಟಿ ಕಾಯ್ದಿಹುದು ಬಿಕ್ಷೆಗಾಗಿ
ಸಿಕ್ಕಷ್ಟೆಸಾಕು ಇಲ್ಲದ್ದು ಬೇಕು ಎನ್ನರೋ ಹೊಟ್ಟೆಗಾಗಿ

ಎತ್ತಿತ್ತ ನೋಡಿದೆ ಸಿರಿ ಜನರ ಬೀಡೆ ತೋರಿತ್ತು ಎನ್ನ ಕಣ್ಗೆ
ಆ ನೋಟವೆಲ್ಲಿ ಈ ನೋಟವೆಲ್ಲಿ ಅಂತರವು ಭೂಮಿ ಬಾನ್ಗೆ
ಆ ಅಟ್ಟಹಾಸ ಈ ವಿಕಟಹಾಸ ನೆರೆಸಾರುತಿಹುವ ಕೇಳು
ಚೆನ್ನಣ್ಣನಡಿಯ ಕಡಪರದ ಹುಡಿಯು ನೆಲದಲ್ಲಿ ಕೂಡ ಗೋಳು

ಮಂಗಳವು ಮೊಳಗಿ ತನು ಮನವು ಬೆಳಗಿ ಕರೆದೊಯ್ಯೆ ಗುಡಿಯ ಒಳಗೆ
ಮನವೆಲ್ಲ ಹಾರಿ ಚೆನ್ನನಲಿ ಸೇರಿ ನಲಿದಿತ್ತು ಅರಿಯದೆನಗೆ
ಮೊಳಗಿದ್ದ ಭೇರಿ ಹೇಳಿತ್ತು ಸಾರಿ ಇಲ್ಲಿಹುದು ಸಗ್ಗವೆಂದು
ಓಡಿತ್ತು ಹೆದರಿ ತಮವೆಲ್ಲ ಜವರಿ ತನಗಿಲ್ಲ ಉಳಿವು ಎಂದು

ಕಲ್ಲಾದರೇನು ಮಣ್ಣಾದರೇನು ಮನವಾಗೆ ಭಕ್ತಿಯಿಂದ
ಕಣ ಕಣವು ಕೂಡ ಕುಣಿಯುವುದು ಗೂಢ ಆಂತರಿಕ ಶಕ್ತಿಯಿಂದ
ಮೂಕಾದರೇನು ಮಾತಿಲ್ಲವೇನು ಕೇಳಿಲ್ಲ ಮನಸಿನಿಂದ
ಆ ಗಂಟೆನಾಲ್ಗೆ ಮಿಳಿದುದ ಕಿವಿಗ ಆ ದೇವ ಭಾಷೆಯಿಂದ

ಮಂದಿರದ ಹೊರಗೆ ಬರುವನಿತರೊಳಗೆ ಎದುರಿತ್ತು ದೇವ ಸೃಷ್ಟಿ
ಎಲ್ಲೆಲ್ಲು ಭಕ್ತಿ ಚಿಮ್ಮುತಿವೆ ಉಕ್ಕಿ ದೇವನಾ ದಿವ್ಯ ದೃಷ್ಟಿ
ಭಕ್ತಿಯೇ ಜೀವ ಭಕ್ತಿಯೇ ಭಾವ ಮುಕ್ತಿಯನು ಬಯಸುವಂದ
ತರಗೆಲೆಯು ಕೂಡ ತಂಗಾಲಿ ಗೂಡ ಭಜಿಸುವುದೊ ಎನ್ನನಂದ

ಅಲ್ಲೊಂದು ತೊರೆಯು ಹಾಡುತ್ತ ಹರಿಯುತಿಹುದಯ್ಯ ದೇವನಾಮ
ತಿರಿ ತೆರೆಯು ಕುಣಿದು ಭಕ್ತಿಯಲಿ ಮಣಿದು ಸೇರುತಿವೆ ಮುಕ್ತಿ ಧಾಮ
ಮೆಲ್ಗಾಳಿ ತಾನು ಮೆಲ್ಲುಲಿಯಲೇನು ಮುಟ್ಟಿಸಿತೊ ಎನ್ನ ಎದೆಗೆ
'ಪ್ರತಿ ಜೀವದಲ್ಲು ಭಕ್ತಿಮಯ ಸೊಲ್ಲು' ಮಣಿದಿರ್ದೆ ದೇವನಡಿಗೆ

ಜಗಕುಣಿಸಲೆಂದೊ ಒರಿ ಮುನಿಸುಗೊಂಡೊ ಬಂದಿರಲು ಗಂಗೆ ಇಳೆಗೆ,
ಇಲ್ಲಿರ್ಪ ಶಿವನ ಕೈಲಾಸ ಬವನ ಅರಿಯದಲೆ ನಾರಿ ಒಳಗೆ
ಶಿವನನ್ನು ಕಂಡು ಅಚ್ಚರಿಯೊಳೆಂದು ಓಡಿರಲು ಮುಂದೆ ಗಿರಿಗೆ
ಜಾರಿದಳು ಜೋಡಿ ಮುಂಗಾಣದೋಡಿ ಜಲಪಾತವಾಗಿ ಕೆಳಗೆ

'ಅಯ್ಯಯ್ಯೊ ಬಂದು ಕಾಪಾಡಿ' ಯೆಂದು ಬೇಡಿರಲು ಆರ್ತಳಾಗಿ
ನೀನೆಂಥ ಹುಚ್ಚಿ ಬಾರಿಲ್ಲಿ ಮೆಚ್ಚಿ ನಿಂದಿಹೆನು ರಕ್ಷೆಗಾಗಿ
ಎಂದೆನುತ ತೋಳ ತೆಕ್ಕೆಯಲ ಅವಳ ಮೆಲ್ಲನೆ ಒರಗಿಸಿಹನು
ಎಲ್ಲೆಲ್ಲು ತಾನು ಅವಿತಿರುವುದನ್ನು ಒಲುಮೆಯಲಿ ತೋರಿಸಿಹನು

ಹೂವಾಗಿ ಮುಗುಳು ತುಂತುರಲಿ ಅರಳುತಿರುವಂಥ ಮಾಟ ನೋಡು
ಸೊಬಗನ್ನೆ ಚೆಲ್ಲುವರಿವಂಥ ಬಿಲ್ಲು ಮಳೆಬಿಲ್ಲಿನಾಟ ನೋಡು
ಮನಹೊಕ್ಕು ಸಪ್ತ ರಂಗವದು ಸುಪ್ತ ಎದೆಯಾಸೆ ಕೆರಳಿಸಿಹುದು
ಪರಶಿವನ ಮೇಲು ರತಿ ಪತಿಯ ಬಿಲ್ಲು ಸೀರಂಬು ಚಿಮ್ಮುತಿಹುದು

ಶಿವನೆರಡು ತೋಳ ತೆಕ್ಕೆಯಲಿ ಅವಳ ಕಾಣಲ್ಕೆ ಎನಿತು ಹರುಷ
ಸೊಬಗಿನಲಿ ಹಾಡಿ ಶಿವನೊಡನೆ ಆಡಿ ಕುಣಿದಿಹಳು ವರುಷ ವರುಷ
ಶಿವಶರಣರವರು ಅವಿತಿಹರೊ ಕೆಲವು ಕೆಲದಿರುವ ಗವಿಯೊಳಿಂದು
ಗವಿಯನ್ನು ಹೊಕ್ಕು ಶಿವ ಶಕ್ತಿಯುಕ್ಕುತಿರುವಂದ ಅರಿಯಲೆಂದು

ಗವಿಗೆಂದು ಸಾಗೆ ಮಿಂಚಿತ್ತು ಬಗ್ಗಿ ಚಿಮ್ಮುತಿಹ ಚೆಲುಮೆಯಗ್ನಿ
ಚೆನ್ನಣ್ಣ ಸ್ನಾನ ಗೈದಿರುವ ತಾಣ ಅಳಿಮನಸ ತೊಳೆವ ಅಗ್ನಿ
ಇದು ನೋಡು ಅಕ್ಕ ನಾಗಾಂಬೆಯಕ್ಕ ಅರಮನೆಯನಾರಿಸಿಹಳು
ಬಸವಣ್ಣನಕ್ಕ ಜಗಕೆಲ್ಲ ತಕ್ಕ ಚೆನ್ನನನು ನೀಡಿದವಳು

ನಗುನಗುತೆ ರಕ್ತ ಸುರಿದಿರ್ದ ಭಕ್ತ ಮಾಚಯ್ಯರಾದಿ ಇಲ್ಲಿ
ಜಗಕೆಂಪೆ ಬಂದು ಜಗಕಾಗಿ ಇಂದು ಅಡಗಿಹರು ಕಾಣದಿಲ್ಲಿ
ಅದುಗೋವ ಗವಿಯು ನಸು ಇಣುಕ ರವಿಯು ಚಣವೊಂದು ಕೂಡ ಒಳಗೆ
ಕತ್ತಲೆಯೆ ತುಂಬಿ ಭೀಕರತೆ ಬಿಂಬಿಸಿಹುದಯ್ಯ ಗೋವಗವಿಗೆ

ಗೋವೊಂದರ ಕಲ್ಲು ನಿಂತಿತ್ತು ಹಾಲು ಕರೆಯುತ್ತ ಎದೆಯೊಳಿಂದ
ಹಾಲಿತ್ತು ಅಂದು ನೀರಿಳಿವುದಿಂದು ಕಲಿಕಾಲಕಿದೆಯು ಅಂದ
ಪಾಳ್ಗವಿಯ ನೆನೆದು ಕಲಿಕಾಲ ಹಳಿದು ಸಾಗಿದೆನು ಗುಡಿಗೆ ತಿರುಗಿ
ಗತಸೊಬಗ ಇಂದು ಕಾಣ್ದಪನೆ ಎಂದು ಚಿಂತಿಸಿದೆ ಮನದಿ ಮರುಗಿ

ಹಸಿದಿರ್ದ ರವಿಯ ಕೆಂಗಣ್ಣ ಕಿಡಿಯ ಪ್ರಖರತೆಗೆ ದೇಹ ನಡುಗೆ
ಮನವೆಲ್ಲ ಬೆಂದು ನೀರೆಲ್ಲಿ ಎಂದು ಸಾಗಿದೆನು ತಿರುಗಿ ತೊರೆಗೆ
ತೊರೆಯಲ್ಲಿ ಮುಳುಗೆ ದಣಿವೆಲ್ಲ ತೊಲಗೆ ಮಾಮರದ ಛಾಯೆಯಲ್ಲಿ
ಸೊಬಗನ್ನೆ ಉಂಡು ಹಸಿವೇಕೆ ಎಂದು ಮಲಗಿದೆನು ಹಸಿರಿನಲ್ಲಿ

ವನದಿಂದ ಹೊರಟು ಬರುವಾಗ ಮುರಲಿ ಮಂಗಳವು ತುಂಬೆ ಎದೆಯ
ಹಾರಿದವು ಹಕ್ಕಿ ಚಿಮ್ಮುತ್ತ ಸೊಕ್ಕಿ ಸಾರಲಿಕ ಗಿರಿಯ ತದಿಯ
ಅದೋ ಮೇಘಮಾಲೆ ತೊಡಿಸಿಹುದು ಮಾಲೆ ತನ್ನಿನಿಯ ಶೈಲತುದಿಗೆ
ಇನ ಸಾಕ್ಷಿಯಾಗಿ ಪತಿ ಪತ್ನಿಯಾಗಿ ನಲಿಯುವುದ ಕಂಡೆ ಸರಗೆ

ಆ ಮಧುರಭಾವ ಇಳೆಗೀಯೆ ಜೀವ ತರಗೆಲೆಯು ಕೂಡ ಕುಣಿಯೆ
ಚಿಗುರೆಲೆಯು ನಕ್ಕು ಯೌವನದ ಸೊಕ್ಕು ಬೀರುತ್ತ ತೆಗಳಿನುಡಿಯೆ
‘ನನಗೊಂದು ಕಾಲ–ನಿನಗೊಂದು ಕಾಲ ಕಾದಿಹುದು ಕಾಲ ಜಾಲ’
ತರಗೆಲೆಯು ನುಡಿದು ಸಿಟ್ಟಿಂದ ಸಿಡಿದು ‘ಯೌವನವು ಕಳೆದ ಕಾಲ!

ನಿಶಿ ರಾಣಿ ಜಾಣೆ ನುಡಿಸಿರಲು ವೀಣೆ ರಸವೆಲ್ಲ ತುಂಬೆ ನನವ
ಆ ರಾಗ ಕರಗಿ ಹೊಸರಾಗ ತಿರುಗಿ ಹೊಗರೇರಿಸಿತ್ತು ನಭವ
ಪೂರ್ಣಿಮೆಯ ಚಂದ್ರ ನಸುನಕ್ಕನಿಂದ್ರ ನಿಶೆಯುರಸಿ ನೃತ್ಯ ಕಂಡು
ಬೆಳ್ದಿಂಗಳಲ್ಲು ದೇವನಾ ನೊಲ್ಲು ತಂದಿಹನು ಸಾಲೆಂದು

ಮನವನ್ನ ತಾನು ಪ್ರಿಯೆಯಾಸೆಯನ್ನು ಪೂರೈಸದಿರಲು ಮೋಡ
ಬೆಳ್ಸೆರಗಿನಾಟ ಚಂದಿರಗೆ ಮಾಟ ಮಾಡಿಹುದು ಕಟ್ಟಿ ಗೂಡ
ಪ್ರಿಯಕರನ ಕಾಯ್ದು ನಿಡಿದಾಗಿ ಸುಯ್ದು ಕಂಬನಿಯು ತುಂಬಿ ನಿಂದು
ನಸು ಹೊಳೆವ ತಾರೆ, ಕಂಬನಿಯು ಸೂರೆಯಾದಂತೆ ತೋರ್ದುವಂದು

ಇರುಳೆಲ್ಲ ಅಳಲಿ ಪ್ರಣಯಿನಿಯು ಬಳಲಿ ತನ್ನಿನಿಯನಾಸೆ ತೊರೆಯೆ
ಕಂಬನಿಯ ಮುತ್ತು ಭುವಿಯಲ್ಲಿ ಬಿತ್ತು ಇಳಿಗಿಳಿವ ತಾರೆ ಮೆರೆಯೆ
ಇರುಳೆಲ್ಲ ಹರಿಯೆ ಮನಮನವ ನೆನೆಯೆ ಹೊರಟಿಹುದು ಮರಳಿ ಜನವು
ಸಂತಸದ ಕೂಗು ಬಾನಿನಲಿ ತೂಗುತಿರಲಾಗ ಮರಳಿ ಮನವು

ನೆನೆದಿತ್ತು ಗುಡಿಯ ತಿಳಿಮೊರೆಯ ತಡಿಯ ಇನ್ನೊಂದು ಕಾಣ್ಬೆನೆಂದು
ಕಾಲ್ದಾರಿವಿಡಿದು ಘಟ್ಟವನು ಇಳಿದು ಸಾಗಿದೆವು ಊರಿಗಂದು
ರಕ್ಕಸನ ಘಟ್ಟ ಮಾರ್ಗದಲಿ ಪಟ್ಟ ಆ ಅಸವು ಕಷ್ಟವೇನು ?
ರಕ್ಕಸನೆ ನಿಂತು ಗಿಡ ಮರದಿ ಅನಿತು ಮಾಡುವನೊ ಮಾಟವನ್ನು

ಧೈರ್ಯದಲಿ ಅಂದು ರಕ್ಕಸನಕೊಂದು ಚೆನ್ನಣ್ಣ ಹೋದನಂತೆ
ರಕ್ಕಸನ ಮೂರ್ತಿ ಗಳಿಸಿದ್ದ ಕೀರ್ತಿ ಸಂತರವೆ ಅಳಿಯಿತಂತೆ
ಒಂದೊಂದು ಕಾಯ ರಕ್ಕಸನ ಕಾಯಕೆಸೆಯಲ್ಕೆ ಪುಣ್ಯವೆಂದು
ನುಡಿದಿಹರು ಜನರು ಬರಿ ಹುಚ್ಚಿನವರು ಶಿಲೆ ಪುಣ್ಯವೀವುದೆಂದು ?

ತಾಯ್ಗರುಳ ಮಾತು ಮೀರದಲೆ ಸೋತು ಮಸೆಯುಲ್ಕೆ ಕಾಯನೊಂದು
ಸಿಡಿದಿರ್ದ ಕಾಯಿ ರಕ್ಕಸನ ಸಾಯಿ ಎಂಬಂತೆ ತೋರಿತಂದು
ಝೇಂಕಾರ ನಾದ ನಡುಗಿಸಲು ಪಾದ ಅಂಜಿದೆನು ರಕ್ಕಸಂಗೆ
ತಾಯನ್ನೆ ಅಪ್ಪಿ ಮರು ನುಡಿಯದೊಪ್ಪಿಕೊಂಡಿದ್ದೆ ಸುಳ್ಳು ನುಡಿಗೆ

ಬಿಕ್ಷಕ್ಕೆ ಕುಳಿತ ತಂಬೂರಿಯಾತ ದಾಸಯ್ಯ ಅತ್ತ ಬಿಕ್ಕಿ
ಮಸಗಾಯು ಜೂರ ಸಿಡಿತಕ್ಕೆ ತಂತಿ ಹರಿದಿರಲು ನಕ್ಕೆ-ಉಕ್ಕಿ !

ಇಳುಕಲಿನ ಇಳಿತ ಮನಕೆಲ್ಲ ಸತತ ಆಹ್ಲಾದ ನೀಡುತಿರಲು
ಭರಏರಿ ಎಳಿತ ಕಾಲ್ನೋವ ಸೆಳಿತ ತನುವನ್ನು ಹಿಂಸಿಸಿರಲು
ಇಳುಕಲವು ಭರದಿ ಕರದೊಯ್ವ ತೆರದಿ ಅವನತಿಯು ಒಯ್ಯುವದೆಮ್ಮ
ಅದೆತಡೆಗಳಿರಿಸಿ ಮನವೆಲ್ಲ ದಣಿಸಿ ಉನ್ನತಿಯು ಸಾರ್ವುದೆಮ್ಮ

ಕಿರುದೊರೆಯು ಕೆಲದಿ ಹೂ ಬಿರಿದ ಬನದಿ ನಿಂತಿಹುದು ಶಿವನ ಪುರವು'
‘ಕೈಲಾಸವಿದುವೆ ಎಂಪೊಪ್ಪುತಿರುವೆ’ ಸೊಬಗಿನಲಿ ತೇಲೆ ಮನವು
ನಗುನಗುತ ನಿಂತ ತನಿವಣ್ಣನಾಂತ ತನಿನಿಂಬೆ ಹಲಸು ಮೆರೆಯೆ
ಚೆಲು ಬಾಳೆ ತೋಟ ಬಲು ನರಸ ನೋಟ ಬೀರುತ್ತ ಬೀಸಿ ಕರೆಯೆ

ಕೋಗಿಲೆಯ ದನಿಯ ಮೀರಿರ್ದ ಇನಿಯ ಇಂಚರವು ಕೇಳುತಿತ್ತು
ಕೈಲಾಸಕಿಂದು ಪಾರ್ವತಿಯೆ ಬಂದು ಹಾಡುವಳೊ ಎನಿಸುತಿತ್ತು
ಕಣ್ಮನವು ಅರಳಿ ಅಚ್ಚರದಿ ಹೊರಳಿ ನೋಡಿರಲು ವನ್ಯಬಾಲೆ
ನೀಳ್ಗಬ್ಬ ಹೊತ್ತು ರಸಿಕಂಗೆ ತುತ್ತು ತಂದಿಪ್ಪ ಚೆಲುವ ಬಾಲೆ

ಸಿರಿಗಣ್ಣ ರಚಿಯೊ ಹಾಲ್ಗನ್ನೆ ರತಿಯೊ ಪೋಣ್ ಸಿರಿಯೆ ಒಂದಳೆ ನೋ
ಸೀ ಕಬ್ಬಿನೊಟ ಹುಸಿ ನಗೆಯ ಮಾಟ ಕೂಡಿಸಿಯೆ ತಂದಳೇನೊ !
ಸರಸತಿಯ ತೆರದಿ ಹಾಡಿರಲು ಕೆಲದಿ ಸುಳಿದಿಹುದು ನವಿಲ ಗುಂಪು
ಗರಿಗೆದರಿ ಕುಣಿಯೆ ಮುಂಬಾಗಿ ಮಣಿಯೆ ಮನಕೆಂಥ ಮಧುರ ಸೊಂಪು

ಮುಂಗುರುಳ ನೋಡು ನೀಲಾಳಿವಿಂಡು ಬಂಡುಣಲು ಬಂದ ತೆರದಿ
ಮುಖಕಮಲ ಕಂಡು ಸ್ವರ್ಗೀಯ ಒಂದು ಇಲ್ಲಿಹುದು ಎಂದು ಭರದಿ
ಬಾಗಿರ್ದ ಪುರ್ಬು ಬಿಲ್ಲಾಗಿ ತೋರ್ದು ಚಿಮ್ಮಿತ್ತು ಎದೆಗೆ ಕಣೆಯ
ಎದೆಯಾಳ ಒಗೆದು ಕಣಕಣದಿ ಮಿಡಿದು ನೆರೆಗೈಯೆ ಎನ್ನ ಎದೆಯ

ಬಳಿ ಭಯದಿ ನಾರಿ ಹೆಸರೇನೆ ನಾರಿ ಎಂದೆನ್ನ ಲಜ್ಜೆತೂರಿ
ಮುಗುಳೊಂದು ಅರಳೆ, ತಲೆಬಾಗೆ ತರಳೆ ಹಾಲ್ಗನ್ನೆ ಕೆಂಪು ಏರಿ
ಬಿಕ್ಷೆಯನು ನೀಡೆ, ಎನುವಂತೆ ನೀಡೆ ಕರವೆರಡು ಜೋಡಿ ಕಬ್ಬ
ತನ್ನೆದೆಯ ಪ್ರೀತಿ ನೀಡಿರ್ದ ರೀತಿ ಮಾಡಿತ್ತು ಎದೆಗೆ ಹಬ್ಬ

ಕಬ್ಬುವಳ ಹೃದಯ ರಸವಸತ ಎದೆಯ ತೂರುತ್ತ ಬಂದ ಪ್ರೀತಿ
ನಾ ಸವಿದು ನೋಡಿ ಮರುಸವಿಯ ನೀಡಿ ಬೆಳಗಲ್ಕೆ ಪ್ರೇಮ ಜ್ಯೋತಿ
ಅರೆಚಣದಿ ಮಿಂಚಿ, ಹೃದಯವನು ವಂಚಿಸಿಹಳಲ್ಲೊ ಮುಗ್ಧಬಾಲೆ
ಮುಗ್ಧತೆಯೊ ಏನೊ ಚಾತುರ್ಯವೇನೊ ತೋರಿಹಳು ತನ್ನಲೀಲ

ಸರಿದೋಡೆ ರಮಣಿ ನೆಗೆವಂತೆ ಹರಿಣಿ ಕಣ್ಬಲೆಗೆ ಸಿಕ್ಕದಂತೆ
ಅಮ್ಮನನು ತೊರೆದು ಬೆಂಬತ್ತಿ ಅಲೆದು ನಾ ಬಲೆಗೆ ಸಿಲುಕಿಸಿಂತೆ
ಗೈದಿಹಳೊ ಮಾಟ ಏನೆಲ್ಲ ಕೂಟ ಸ್ಫುರಿಸಿ ಗುಡಿಸಿಲಲ್ಲಿ
ರಸಬಾಳೆ ನೀಡೆ ಜತೆಗಣ್ಣು ಕೂಡೆ ಹುಸಿಗೋಪದರಳು ಚೆಲ್ಲಿ

ಆ ನಿಮಿಷದಲ್ಲಿ ಒಂದೆಂಬ ಸೊಲ್ಲೆ ಮಿಡಿದಿತ್ತು ಎದೆಯ ಆಳ
ಎನಗರಿಯದಂತೆ ಬಳಿಸಾರಿ ಕಾಂತ ನುಡಿದಿತ್ತು ಹೃದಯ ತಾಳ
ಬನಸಿರಿಯ ಹಿರಿಮೆ ಕಂಡೆದೆಯ ಒಲುಮೆ ಉಕ್ಕಿರಲು ಸೊಬಗನುಂಡೆ
ಹಾಡುತ್ತ ನಾನು, ಎನ್ನರಸಿ ತಾನು ಹೂ ಕೊಯ್ಯುತಿಹುದ ಕಂಡೆ

ಹೂಮರವದೊಂದು 'ಬಾ ಇಲ್ಲಿ" ಎಂದು ಕರೆದಿತ್ತು ತಳಿರ ಬೀಸಿ
'ಎಲೆ ಸಖಿ ಇಂದು ನಿಮಗಾಗಿಯೆಂದು ಕಾಯ್ದಿಹೆನು ಹಸಿರ ಹಾಸಿ'
ಪ್ರೀತಿರ್ದ ಮಾಸ ತಂಗೆಳಲ ತಾನ ಮರೆಸಿರಲು ಎದೆಯ ನೋವ
ಭೃಂಗಾಳಿ ಹಾಡಿ ಹೂಪ್ರೊಡನೆ ಆಡಿ ನೀಡಿರಲು ಬನಕೆ ಜೀವ

ತಿಂಗಳನ ಪದದಿ ತುಂಬಿಹವು ಹೆಳದಿ ನಸುಗೆಂಪು ಚಿಮ್ಮುತಿರಲು
ಅರಳಿರ್ದ ಸನೆಯು ತುಂಬಿರ್ದ ತೆನೆಗಳು ನಸುನಗುತ ತೂಗುತಿರಲು
ಕಮ್ಮಲರು ಕಣ್ಣಾಗು ಲವಣಡೆಗೆ ಮಣಿದು ಸ್ವೀಕರಿಸು ಎಂಬ ಭಾವ
ತೋರಿರಲು ನಲಿದು ಅರಿವಿಲ್ಲದೊಲು ಹರಿದು ಮುಡಿಸಿದೆನು ಮುಡಿಗೆ ಹೂವ

ತಿಂಗೊಳನ ದಪದಿ ಕೆಂಪಿನಲಿ ಬಸದಿ ಒಡ್ಡೇಲಿಯಂತೆ ತೋರಿ
ಆ ಶಾಂತ ಕೊಳದಿ ಸ್ಮೈನು-ಲ್ಯ ಜಲದಿ ಪದಲಾಸ್ಯವಾಡೆ ತೂರಿ
ಸುಳಿಸುಳಿವ ಅಲೆಯು ಕವಿಭಾವ ಒಲೆಯು ನೇಯ್ದಿರಲು ಕಾವ್ಯಕುಂಜ
ಅಲೆಯೊಡನೆ ಕುಣಿದು ಸರಸಿಜವು ಮಣಿದು ತಾಕಿರಲು ಎದೆಯ ಅಂಚ

ಎನ್ನೆದೆಯು ಸುರಸ ಜಲದಲ್ಲಿ ಸರಸ ಅಲೆಯನ್ನೆ ಹುಟ್ಟಿಸಿಹಳು
ಅಲೆಸುಳಿಗೆ ಸಿಕ್ಕ ಎನ್ನೆದೆಯು ದಿಕ್ಕು ತೋರದೊಲು ಬಳಲಿಸಿಹಳು-
ಅತ್ತೊಮ್ಮೆ ಬಾಗಿ ಇತ್ತೊಮ್ಮೆ ಬಾಗಿ ಏನೊಂದು ಅರಿಯದಂತೆ
ಮೆಲುಗಾಳಿಗೆ ಸಿಲುಕಿ ತಲೆವಾಗಿ ಬಳುಕಿ ನಳನಲಿವ ಕಮಲದಂತೆ

ಎನ್ನೆದೆಯ ವೀಣೆ ಮಿಡಿದಿಹಳು ಜಾಣೆ ಹೊಮ್ಮಿರಲು ರಾಗ ರಂಗ
ಅಲೆಯಲೆಗೆ ಬಡಿದು ಕಣಕಣವು ಕುಣಿದು ನುಡಿವಂತೆ ಜಲತರಂಗ
ಬಳಿಯಲ್ಲಿ ನಿಂದು ಮುನಿಸೇಕೆ ಎಂದು ದೈನ್ಯದಲಿ ತಪಿಸುತಿರಲು
ಎದೆಗೆದೆಯ ನೀಡಿ ಮುನಿಸೆನ್ನ ಬೇಡಿ ಎಂದವಳು ಬೇಡುತಿರಲು

ಆ ಒಂದೆ ಮಾತು ಅಮೃತವನಾಂತು ಸುರಿದಿತ್ತು ಎನ್ನ ಎದೆಗೆ
ಆ ಒಂದೆ ನಿಮಿಷ ಸವಿದೆನೋ ಹರುಷ ನೀಡಿರಲು ತುಟಿಯ ತುಟಿಗೆ
ಎದೆಯಾಳ ಬಿರಿದು ದಡಕೊಚ್ಚಿ ಬಂದು ಚಿಮ್ಮಿತ್ತು ರಸವು ಉಕ್ಕಿ
ಹಾಡಿರಲು ಹಕ್ಕಿ ಎನ್ನೆದೆಯೊಳುಕ್ಕಿ ನಲ್ಗೀತೆ ಮುದದಿನೊಕ್ಕಿ

ಪ್ರೇಮಿಗಳ ಮಿಲನ ಜಗಕೆಲ್ಲ ಚಲನಮಿತ್ತಿರಲು ಸಂಜೆಯರುಣ
ಹೊಂಬೆಳಗ ನೀಡಿ ತೆರೆಯೊಡನೆ ಆಡಿ ನರ್ತಿಸುತಲಿರಲು ಕಿರಣ
ತಂಗಾಳಿ ಹಾಡಿ ಗಿಡಬಳ್ಳಿ ಬಾಗಿ ಕರೆದಿಹವು ಪುಷ್ಪವರ್ಷ
ಮಂಗಲವ ಹಾಡಿ ಹರಕೆಯನು ನೀಡಿ ಬೀರಿಹವು ಎದೆಯ ಹರ್ಷ

ಅಂದೆನ್ನ ಮನಸು ಇರುಳಿಲ್ಲ ಕನಸು ಕಂಡಿತ್ತು ಚಲುವೆಯೊಡನೆ
ಸಗ್ಗವನು ಸಾರಿ ಅಮೃತವ ಹೀರಿ ಒಂದಾಗಿ ಅಮರರೊಡನೆ
ತಣ್ಣನ್ನ ಚದಿರು ಗುಡಿಸಲಿನ ಬಿದಿರು ಸರಿಸುತ್ತ ಒಳಗೆ ಇಣುಕೆ
ನಸುನಗುತ ಬಂದು ಎದೆಯಲ್ಲಿ ಇಳಿದು ಮನದಾನೆಯನ್ನು ಕೆಣಕೆ

ಎಲೆವನೆಯ ತೊರೆದು ಬಾಗಿಲವ ತೆರೆದು ಹೊರವಂಟ ಬಯಲಿಗಿಳಿದು
ತಿಳಿಚೆನ್ನ ಜೊನ್ನ ತುಂಬಿರಲು ತನ್ನ ಬೆಳ್ನೊರೆಯ ಸುತ್ತ ಸುರಿದು
ತರಗೆಲೆಯು ಅಲುಗೆ ಎನ್ನೊಲವೆ ಬಳಿಗೆ ಬರುತಿಹಳೊ ಎಂದು ನೆನೆದೆ
ಲತೆಯಾಗಿ ಅಡಗಿ ನಿಂದಿಹಳೊ ಬೆಡಗಿ ಎಂದರಸಿ ಉಸಿರುಗರೆದೆ

ತಾಯ್ಗರುಳ ಮಾತು ಮೀರದಲೆ ಸೋತು ಮನೆಯಲ್ಲಿ ಕಾಯನೊಂದು
ಸಿಡಿದಿರ್ದ ಕಾಯಿ ರಕ್ಕಸನ ಮಾಯೆ ಎಂಬಂತೆ ತೋರಿತಂದು
ಝೇಂಕಾರ ನಾದ ನಡುಗಿಸಲು ವಾದ ಅಂಜದೆನು ಅಕ್ಕಸಂಗೆ
ತಾಯನ್ನೆ ಅಪ್ಪಿ ಮರು ನುಡಿಯದೊಪ್ಪಿಕೊಂಡಿದ್ದೆ ಸುಳ್ಳು ನುಡಿಗೆ

ಬಿಕ್ಕಿಕ್ಕಿ ಕುಳಿತ ತಂಬೂರಿಯಾತ ದಾಸಯ್ಯ ಅತ್ತು ಬಿಕ್ಕಿ
ಮನೆಗಾಯಿ ಚೂರ ಸಿಡಿತಕ್ಕೆ ತಂತಿ ಹರಿದಿರಲು ಸಕ್ಕಿ-ಉಕ್ಕಿ !

ಇಳುಕಲಿನ ಇಳಿತ ಮನಕೆಲ್ಲ ಸತತ ಆಹ್ಲಾದ ನೀಡುತಿರಲು
ಭರಏರಿ ಎಳಿತ ಕಾಲ್ನೋವ ಸೆಳೆತ ತನುವನ್ನು ಹಿಂಸಿಸಿರಲು
ಇಳುಕಲವು ಭರದಿ ಕರವೊಯ್ವ ತೆರದಿ ಅವನತಿಯು ಒಯ್ವುದೆಮ್ಮ
ಅಡೆತಡೆಗಳಿರಿಸಿ ಮನವೆಲ್ಲ ದಣಿಸಿ ಉನ್ನತಿಯು ನಾಯ್ವುದೆಮ್ಮ

ಕಿರುದೊರೆಯ ಕೆಲದಿ ಹೂ ಬಿರಿವ ಬಸದಿ ನಿಂತಿಹುದು ಶಿವನ ಪುರವು
‘ಕೈಲಾಸವಿದುವೆ ಎಂದೊಪ್ಪುತಿರುವೆ’ ಸೊಬಗಿನಲಿ ತೇಲಿ ಮನವು
ನಗುನಗುತ ನಿಂತ ತನಿವಣ್ಣನಾಂತ ತನಿನಿಂಬೆ ಹಲಸು ಮೆರೆಯೆ
ಚೆಲು ಬಾಳೆ ತೋಟ ಬಲು ಸರಸ ನೋಟ ಬೀರುತ್ತ ಬೀಸಿ ಕರೆಯೆ

ಕೋಗಿಲೆಯ ದನಿಯ ಮೀರಿರ್ದ ಇನಿಯ ಇಂಚರವು ಕೇಳುತಿತ್ತು
ಕೈಲಾಸಕಿಂದು ಪಾರ್ವತಿಯೆ ಬಂದು ಹಾಡುವಳೊ ಎನಿಸುತಿತ್ತು
ಕಣ್ಮನವು ಅರಳಿ ಅಚ್ಚರದಿ ಹೊರಳಿ ನೋಡಿರಲು ವನ್ಯಬಾಲೆ
ನೀಳ್ಗಬ್ಬ ಹೊತ್ತು ರಸಿಕಂಗೆ ತುತ್ತು ತಂದಿಪ್ಪ ಚೆಲುವ ಬಾಳೆ

ಸಿರಿಗಣ್ಣ ಶಚಿಯೊ ಹಾಲ್ಗೆನ್ನೆ ರತಿಯೊ ಮೇಣ್ ಸಿರಿಯೆ ಬಂದಳೇನೋ
ಸೀ ಕಬ್ಬಿನೂಟ ಹುಸಿ ನಗೆಯ ಮಾಟ ಕೂಡಿಸಿಯೆ ತಂದಳೇನೊ !
ಸರಸತಿಯ ತೆರದಿ ಹಾಡಿರಲು ಕೆಲದಿ ನುಳಿದಿಹುದು ನವಿಲ ಗುಂಪು
ಗರಿಗೆದರಿ ಕುಣಿಯೆ ಮುಂಬಾಗಿ ಮಣಿಯೆ ಮನಕೆಂಥ ಮಧುರ ನೊಂಪು

ಮುಂಗುರುಳ ನೋಡು ನೀಲಾಳಿದಂಡು ಬಂಡುಣಲು ಬಂದ ತೆರದಿ
ಮುಖಕಮಲ ಕಂಡು ಸ್ವರ್ಗೀಯ ಬಂಡು ಇಲ್ಲಿಹುದು ಎಂದು ಭರದಿ
ಬಾಗಿರ್ದ ಪುರ್ಬು ಬಿಲ್ಲಾಗಿ ತೋರ್ದು ಚಿಮ್ಮಿತ್ತು ಎದೆಗೆ ಕಣೆಯ
ಎದೆಯಾಳ ಒಗೆದು ಕಣಕಣದಿ ಮಿಡಿವ ನೆರಗೈಯೆ ಎನ್ನ ಎದೆಯ

ಒಳಿ ಭಯದಿ ನಾರಿ ಹೆಸರೇನೆ ನಾರಿ ಎಂದೆನ್ನೆ ಲಜ್ಜೆತೂರಿ
ಮುಗುಳೊಂದು ಅರಳಿ, ತರೆನಾಗೆ ತರಳೆ ಹಾಲ್ಗೆನ್ನೆ ಕೆಂಪು ಏರಿ
ಬಿಕ್ಷೆಯನು ನೀಡೆ, ಎನುವಂತೆ ನೀಡೆ ಕರವೆರಡು ಬೇಡಿ ಕಬ್ಬ
ತನ್ನೆದೆಯ ಪ್ರೀತಿ ನೀಡಿರ್ದ ರೀತಿ ಮಾಡಿತ್ತು ಎದೆಗೆ ಹಬ್ಬ

ಕಬ್ಬವಳ ಹೃದಯ ರಸವವಳ ಎದೆಯ ತೂರುತ್ತ ಬಂದ ಪ್ರೀತಿ
ನಾ ಸವಿದು ನೋಡಿ ಮರುಸವಿಯ ನೀಡಿ ಬೆಳಗಲ್ಕೆ ಪ್ರೇಮ ಜ್ಯೋತಿ
ಅರೆಚಣದಿ ಮಿಂಚಿ, ಹೃದಯವನು ವಂಚಿಸಿಹಳಲ್ಲೊ ಮುಗ್ದಬಾಲೆ
ಮುಗ್ಧತೆಯೊ ಏನೊ ಚಾತುರ್ಯವೇನೊ ತೋರಿಹಳು ತನ್ನಲೀಲೆ

ಸರಿದೋಡೆ ರಮಣಿ ನೆಗೆವಂತೆ ಹರಿಣಿ ಕಣ್ಬಲೆಗೆ ಸಿಕ್ಕದಂತೆ
ಅಮ್ಮನನು ತೊರೆದು ಬೆಂಬತ್ತಿ ಅಲೆದು ನಾ ಬಲೆಗೆ ಸಿಲುಕಿನಿಂತೆ
ಗೈದಿಹಳೊ ಮಾಟ ಏನೆಲ್ಲ ಕೂಟ ಕುಳ್ಳಿರಿಸಿ ಗುಡಿಸಿಲಲ್ಲಿ
ರಸಬಾಳೆ ನೀಡೆ ಜತೆಗಣ್ಣು ಕೂಡೆ ಹುಸಿಗೋಪದರಳು ಚೆಲ್ಲಿ

ಆ ನಿಮಿಷದಲ್ಲಿ ಒಂದೆಂಬ ಸೊಲ್ಲೆ ಮಿಡಿದಿತ್ತು ಎದೆಯ ಆಳ
ಎನಗರಿಯದಂತೆ ಬಳಿಸಾರೆ ಕಾಂತೆ ನುಡಿದಿತ್ತು ಹೃದಯ ತಾಳ
ಬನಸಿರಿಯ ಹಿರಿಮೆ ಕಂಡೆದೆಯ ಒಲುಮೆ ಉಕ್ಕಿರಲು ಸೊಬಗನುಂಡೆ
ಹಾಡುತ್ತ ನಾನು, ಎನ್ನರಸಿ ತಾನು ಹೂ ಕೊಯ್ಯುತಿಹುದ ಕಂಡೆ

ಮಾಮರವದೊಂದು "ಬಾ ಇಲ್ಲಿ" ಎಂದು ಕರೆದಿತ್ತು ತಳಿರ ಬೀಸಿ
'ಎಲೆರಸಿಕ ಇಂದು ನಿನಗಾಗಿಯೆಂದು ಕಾಯ್ದಿಹೆನು ಹಸಿರ ಹಾಸಿ'
ಪ್ರೀತಿರ್ದ ಮಾನ ತಂಶೆಲತಾವ ಮರೆಸಿರಲು ಎದೆಯ ನೋವ
ಭೃಂಗಾಳಿ ಹಾಡಿ ಹೂವೊಡನೆ ಆಡಿ ನಿಂಡಿರಲು ಬನಕೆ ಜೀವ

ತಿಳಿಗೊಳನ ದಡದಿ ತುಂಬಿಹವು ಹಸದಿ ನಸುಗೆಂಪು ಚಿಮ್ಮುವರಲು
ಅರಳಿರ್ದ ನನೆಯು ತುಂಬಿರ್ದ ತೆನೆಯು ನಸುನಗುತ ತೂಗುತಿರಲು
ಕಮ್ಮಲರು ಕುಣಿಸು ಅವಳೆಡೆಗೆ ಮಣಿದು ಸ್ವೀಕರಿಸು ಎಂಬ ಭಾವ
ತೋರಿರಲು ನರಿದು ಲರಿಯುದೊಲು ಹರಿದು ಮುಡಿಸಿದೆನು ಮುಡಿಗೆ ಹೂವ

ತಿಳಿಗೊಳನ ದಡದಿ ಕುಳಿರಲು ಬನದಿ ಬನವೇವಿಯಂತೆ ತೋರಿ
ಆ ಶಾಂತ ಕೊಳದಿ ನೈರ್ಮಲ್ಯ ಜಲದಿ ನವಲಾಸ್ಯವಾಡೆ ತೂರಿ
ಸುಳಿಸುಳಿವ ಅಲೆಯ ಕವಿಭಾವ ಬಲೆಯ ನೇಯ್ದಿರಲು ಕಾವ್ಯಕುಂಜ
ಅಲೆಯೊಡನೆ ಕುಣಿದು ಸರಸಿಜವು ಮಣಿದು ತಾಕಿರಲು ಎದೆಯ ಅಂಚ

ಎನ್ನೆದೆಯ ಸುರಸ ಜಲದಲ್ಲಿ ಸರಸ ಅಲೆಯನ್ನೆ ಹುಟ್ಟಿಸಿಹಳು
ಅಲೆಸುಳಿಗೆ ಸಿಕ್ಕು ಎನ್ನೆದೆಯು ದಿಕ್ಕು ತೋರದೊಲು ಬಳಲಿಸಿಹಳು-
ಅತ್ತೊಮ್ಮೆ ಬಾಗಿ ಇತ್ತೊಮ್ಮೆ ಬಾಗಿ ಏನೊಂದು ಅರಿಯದಂತೆ
ಮೆಲುಗಾಳಿಗೆ ಸಿಲುಕಿ ತಲೆವಾಗಿ ಬಳುಕಿ ನಳನಳಿಪ ಕಮಲದಂತೆ

ಎನ್ನೆದೆಯ ವೀಣೆ ಮಿಡಿದಿಹಳು ಜಾಣೆ ಹೊಮ್ಮಿರಲು ರಾಗ ರಂಗ
ಅಲೆಯಲೆಗೆ ಬಡಿದು ಕಣಕಣವು ಕುಣಿದು ನುಡಿವಂತೆ ಜಲತರಂಗ
ಬಳಿಯಲ್ಲಿ ನಿಂದು ಮುನಿಸೇಕೆ ಎಂದು ದೈನ್ಯದಲಿ ತಪಿಸುತಿರಲು
ಎದಗೆವೆಯ ನೀಡಿ ಮುನಿಸೆನ್ನ ಬೇಡಿ ಎಂದವಳು ಬೇಡುತಿರಲು

ಆ ಒಂದೆ ಮಾತು ಅಮೃತವನಾಂತು ಸುರಿದಿತ್ತು ಎನ್ನ ಎದೆಗೆ
ಆ ಒಂದೆ ನಿಮಿಷ ಸವಿದೆನೋ ಹರುಷ ನೀಡಿರಲು ತುಟಿಯ ತುಟಿಗೆ
ಎದೆಯಾಳ ಬಿರಿದು ಪಡಕೊಚ್ಚಿ ಬಂದು ಚಿಮ್ಮಿತ್ತು ರಸವು ಉಕ್ಕಿ
ಹಾಡಿರಲು ಹಕ್ಕಿ ಎನ್ನೆದೆಯೊಳುಕ್ಕಿ ನಲ್ಗೀತೆ ಮುದದಿಸೊಕ್ಕಿ

ಪ್ರೇಮಿಗಳ ಮಿಲನ ಜಗಕೆಲ್ಲ ಚಲನವಿತ್ತಿರಲು ಸಂಜೆಯರುಣ
ಹೊಂಬೆಳಗ ನೀಡಿ ತೆರೆಯೊಡನೆ ಆಡಿ ನರ್ತಿಸುತಲಿರಲು ಕಿರಣ
ತಂಗಾಳಿ ಹಾಡಿ ಗಿಡಬಳ್ಳಿ ಬಾಗಿ ಕರೆದಿಹವು ಪುಷ್ಪವರ್ಷ
ಮಂಗಲವ ಹಾಡಿ ಹರಕೆಯನು ನೀಡಿ ಬೀರಿಹವು ಎದೆಯ ಹರ್ಷ

ಅಂದೆನ್ನ ಮನಸು ಇರುಳೆಲ್ಲ ಕನಸು ಕಂಡಿತ್ತು ಚಲುವೆಯೊಡನೆ
ಸಗ್ಗವನು ಸಾರಿ ಅಮೃತನ ಹೀರಿ ಒಂದಾಗಿ ಅಮರರೊಡನೆ
ತಣ್ಣನ್ನ ಚದಿರು ಗುಡಿಸಲಿನ ಬಿದಿರು ಸರಿಸುತ್ತ ಒಳಗೆ ಇಣುಕೆ
ನಸುನಗುತ ಬಂದು ಎವೆಯಲ್ಲಿ ಇಳಿದು ಮನಪಾಸೆಯನ್ನು ಕೆಣಕೆ

ಎಲೆಮನೆಯ ತೊರೆದು ಬಾಗಿಲವ ತೆರೆದು ಹೊರವಂಟ ಬಯಲಿಗಿಳಿದು
ತಿಳಿಚೆನ್ನ ಜೊನ್ನ ತುಂಬಿರಲು ತನ್ನ ಬೆಳ್ನೊರೆಯ ಸುತ್ತ ಸುರಿದು
ತರಗೆಲೆಯು ಅಲುಗೆ ಎನ್ನೊಲವೆ ಬಳಿಗೆ ಬರುತಿಹಳೊ ಎಂದು ನೆನೆದೆ
ಲತೆಯಾಗಿ ಅಡಗಿ ನಿಂದಿಹಳೊ ಬೆಡಗಿ ಎಂದರಸಿ ಉಸಿರುಗರೆದೆ

ಬಾರಿಲ್ಲಿ ಚೆಲುವೆ ಎನ್ನೆದೆಯ ಒಲವೆ ನಿನಗಾಗಿ ಕಾಯುತಿಹೆನು
ಅಭ್ರಾಳಿಯೊಡನೆ ಆಡುತ್ತ ತಾನೆ ಚಂದಿರನು ಬೆಳಗುತಿಹನು
ಮುಸುಕನ್ನು ದೂಡಿ ತಂಬೆಳಗನೀಡಿ ಕುಣಿಸುತ್ತಲಿಹನು ಬನವ
ಬನವಾಗಿ ಕುಣಿದು ಸುಮವಾಗಿ ಮಣಿದು ನೀಬಂದು ತಣಿಸು ಮನವ

ಅರಳುತ್ತಲಿಹುದು ಮಲ್ಲಿಗೆಯು ಬಿರಿದು ಚೆಲು ಉಷೆಯ ಮುಗುಳಿನಂತೆ
ನಸು ನಗೆಯ ಮೊಗ್ಗೆ ಚಿಮ್ಮಿಸಲಿ ಬುಗ್ಗೆ ಮುಂಬೆಳಗು ಚಿಮ್ಮುವಂತೆ
ತಂಗಾಳಿ ಸುಳಿದು ಇರುಳೆಲ್ಲ ಕಳೆದು ಹಕ್ಕಿಗಳು ಉಲಿಯುತಿಹವು
ನಿನಗಾಗಿ ಮುತ್ತು ಮಣಿಮಾಲೆ ಹೊತ್ತು ಗಿಡಬಳ್ಳಿ ಕಾಯುತಿಹವು

ನಿನ್ನಿನಿಯ ಪದದ ತಾಲಕ್ಕೆ ನಿನದಗೆಂಡಲೆಂದು ಹಸಿರು ಹುಲ್ಲು
ಗೆಜ್ಜೆಯನು ಅಂತು ನಿಂದಿಹುದು ಸುತ್ತು ಒಂದಿನಿತು ಕೇಳು ನಿಲ್ಲು
ಬರವನ್ನು ಕಾಯ್ದು ನಿಡಿದಾಗಿ ಸುಯ್ದು ಅಳಲುತ್ತಲಿರಲು ಶಿಲೆಯು
ಕಾರಿಣ್ಯ ಕರಗಿ ಮನವೆಲ್ಲ ಮರುಗಿ ನಿಂದಿಹುದು ತುಂಬಿ ಹೃದಯ

ಎನ್ನಳಲನರಿತು ಶಿಲಿಕೊಡಹನಿತು ಕಂಬನಿಯ ಸೂಸುತಿರಲು
ನಿನ್ನೆದೆಯೊಳಿನಿತು ಮಿಡಿಯದೇ ತಂತು ಜಗವೆಲ್ಲ ದ್ರವಿಸುತಿರಲು
ಶುಚಿಯಾಗಿ ಮಿಂದ ನಗುನಗುತ ಬಂದ ನಸುಲಜ್ಜೆ ವೆಣ್ಣಿನಂತೆ
ನಿಂದಿಹುದು ಕಮಲ ತನ್ನಿನಿಯ ನಮಲ ಪ್ರೇಮದಾ ಕಣ್ಣಿನಂತೆ

ತಾವರೆಯ ರಮಣ ಹೊಂಗಿರಣದರುಣ ತನ್ನೊಲುಮೆಯುರಸಿ ಗೂಡ
ನಲ್ಗಬ್ಬದೂಟ ಆಡಿರಲು ಆಟ ನಾನಾಡಲಾರ ಕೂಡ ?
ಹಕ್ಕಿಗಳ ಜೋಡಿ ಹಾರಿರಲು ಕೂಡಿ ಹಾಡುತ್ತ ಪ್ರೇಮಗೀತೆ
ನಾನೋರ್ವನಲೆದು ನಿನ್ನನ್ನು ತೊರೆದು ಹಾಡುತಿಹೆ ವಿರಹ ಗೀತೆ !

ಅದೊ ನೋಡು ತುಂಬಿ ನೊಕ್ಕಿ ಎದೆದುಂಬಿ ಹೂವೊಡನೆ ಆಡುತಿಹುದು
ಸುಮ ಸುಮಕ ಹಾರಿ ಸುಧೆಯನ್ನು ಹೀರಿ ಗುಂಯೆಂದು ಹಾಡಿ ನಲಿದು
ಆ ಮೇಘ ಲಲನೆ ಗಿರಿಯಿನಿಯ ನೊಡನೆ ಮುತ್ತಿಟ್ಟು ನಲಿಯುತಿಹಳು
ಗಿರಿಗಾಗೆ ಮೋಡ ಎನಗಾರು ನೋಡ ಹೇಳೆನ್ನ ನೀರೆ ಹೇಳು

ನೆಗೆವೆರಳೆ ತೆರದಿ ಕುಣಿಯುತ್ತ ಭರದಿ ಬಾರೆನ್ನ ಚಲುವ ನಾರಿ
ಜೊತೆವಕ್ಕಿ ತೆರದಿ ಹಾರೋಣ ಮುದದಿ ತೆರೆದಿಹುದು ಸೊಗಕ ದಾರಿ
ಕೋಕಿಲೆಯು ಕುಪಿದು ನೀನೆನ್ನನೊಲಿದು ಬಳಿಸಾರ್ವೆ ಎನ್ನುತಿಹುದು
ಮಾಂದಳಿರ ಗೊನೆಯು ಕಟ್ಟಿರ್ದ ತನೆಯು ಅಹುದೆಂದು ತೂಗುತಿಹುದು

ಬನದೇವಿ ಬರಲು ನಲ್ವಕ್ಕಿ ಕೂರಲು ತಮ್ಮೊಲವ ಬೀರುವಂತೆ
ಹಾಡುತ್ತ ತಾವು ಕುಣಿಯುತ್ತಲಿಹವು ನಿಸ್ಸರವ ಸಾರುವಂತೆ
ಎನ್ನೆದೆಯ ಗೂಡ ಚೆಲುಹಕ್ಕಿ ಕೂಡ ಅಂತರ್ಯ ವ್ಯೋಮದಿಂದ
ನಿಟ್ಟಿಸು: ನೋಡಿ ಸಂತಸದಿ ಹಾಡಿ ಸಾರಿಹುದು ಬರುವ ಅಂದ

ದೈವವನು ಹಳಿದು ಚೆಲುವೆಯನು ನೆನೆದು ತಪಿಸುತ್ತ ಅಳಲುತಿರಲು
ಕದರಿರ್ದ ಕುರುಳು ನೆವರಿಪ ಬೆರಳು ಆರದೋ ನೋಂಕುತಿರಲು
ಭೂದೇವಿ ಬಂದು ಕೆಲವಲ್ಲಿ ನಿಂದು ನೇವರಿಪಳೇನೊ ರಮಿಸಿ
ಎನ್ನೆದೆಯ ಕರೆಯ ಕೇಳಿದಳೊ ಹೃದಯ ದೇವತೆಯು ಎಂದು ಅನಿಸೆ

ನಲುಮೆಯಲಿ ಓಲಿ ಮನವೆಲ್ಲ ತೇಲಿ ನವಿಯುತ್ತಲಿರಲು ನೊಗವ
ಬಾಗಿದಳು ಚಮರೆ ನೀಡಲಿಕೆ ಮದಿರೆ ಚೆಂದುಟಿಯ ಮುತ್ತಿನೊಲವ
ತುಂಬಿರಲು ಹೃದಯ ತಾಕಿಸುತೆ ಎದೆಯ ಒಂದಾಗಿ ನಾವು ನಲಿಯೆ
ನಮ್ಮೆದೆಯ ಹಕ್ಕಿ ಹಾರಿರಲು ನೊಕ್ಕಿ ಉನ್ನತದ ನವಿಯ ಸವಿಯೆ

ಕರುಳಿರದ ಕಲ್ಲು ಅದು ಎಂತು ಬಲ್ಲುದೆನ್ನೆದೆಯ ತೀರದಿಚ್ಛೆ
ಪ್ರತಿದನಿಸಿ ಘಟ್ಟ ನುಡಿದಿತ್ತು ಅಟ್ಟಹಾಸದಲಿ "ನಿನಗೆ ಹುಚ್ಚೆ ?"
ಎದುರಿರ್ದ ಹಣತಿ ಬೀರಿತ್ತು ಜ್ಯೋತಿ ಅಂಧತೆಯ ಆಳ ಬೆಳಗಿ
"ಹುಚ್ಚಿಲ್ಲ ಪ್ರೇಮ ಅಲ್ಲಡಗಿ ಕಾವು ಕುಣಿಸಿಹುದು ತಿರುಗಿ ತಿರುಗಿ"

ಹುಚ್ಚಾನೆ ಬಿಟ್ಟು ಹೊಸ ಜೀವ ತೊಟ್ಟು ಹೊಸ ಮನುಜನಾಗಿ ಒಂದೆ
ಇರುಳೆಲ್ಲ ಸಂದು ಹೊಂಗಿರಣವೊಂದು ನಗುತಿಹುದ ಕಂಡು ನಿಂದೆ!
ಹಿಂದಿದ್ದ ಇರುಳು ಈಗಿಲ್ಲ ಮರುಳು ಕಳೆದಿಹುದು ಮನಸಿನಿಂದ
ನಿಜ ಬೆಳಗು ಬಂದು ಎಚ್ಚರಿಸಿತಿಂದು ಎನ್ನೆದೆಯ ಕನಸಿನಿಂದ

ಹೂಬಳ್ಳಿ ಕಂಡು ಎದಸೊಗವ ನುಂಡು ಮರೆತಿತ್ತು ಹಳೆಯ ನೆನವ
ನೇಸರನು ಮೂಡಿ ಹೊಸಬೆಳಗ ನೀಡಿ ತೋರಿಹನು ಹೊಸತು ಜಗವ
ಜೀವನದ ಯಾತ್ರೆ ಜಗಕೆಲ್ಲ ಜಾತ್ರೆ ಜನಕೊಂದು ಹಬ್ಬದೂಟ
ಆ ಯಾತ್ರೆ ಸಿರಿಮಿಷ ಮನಕೆಲ್ಲ ಹರುಷ ರಸಿಕಂಗೆ ರಸದ ಊಟ

ನಿಬ್ಬಣದ ಮಾಟ ಏನೆಂಥ ಆಟ ಕಣ್ಮನಕೆ ಸರಸ ನೋಟ
ಅಮೃತವು ಕಿವಿಗೆ ವರ್ಣನೆಯ ಸವಿಗೆ ಹೃದಯಕ್ಕೆ ಆಪ್ತಮಾಟ
ನವ ಜೀವವಾಂತು ಹೊಸಭಾವ ತಂತು ಕುಣಿಸಿಹುದು ಇಳೆಯ ನಿಂದು
ಹಗಲಿರುಳ ಯಾತ್ರೆ ಜಗಕೊಂದು ಜಾತ್ರೆ ಚೈತನ್ಯ ಪಡೆಯಲೆಂದು

---

# ಕನಸಿನಲ್ಲಿ

ಹೃದ್ವೀಣೆ ಮುರಿದಿರಲು ಶಾರದೆಯನರಸಿದೆನು
ಮುರಿದೆನ್ನ ವೀಣೆಯನು ಸರಿಪಡಿಸು ಎಂದು
ಕೈಲಿ ವೀಣೆಯ ಹಿಡಿದು ಚೆಲ್ವೆಣ್ಣ ಬೇಡಿದೆನು
ಅವರೆಲ್ಲ ಸರಸತಿಯ ಅವತಾರವೆಂಬು

ದೂಡಿದರು ಕೆಲರವರು ಥೂ ಎಂದರುಳಿದವರು
ಆರಲ್ಲಿ ಒಂದಿನಿತು ಮಾರ್ದವತೆ ಇಲ್ಲ
ಬಾರೆನ್ನ ಕವಿಯೆಂದು ಎದೆಗಪ್ಪಿಕೊಂಡಿಹರು
ಪ್ರಣಯದಾ ಆವೇಶ ಹಾಯ್ ಎನಗೆ ಹೊಲ್ಲ

ಮಂದಿರದ ಬಾಗಿಲಲಿ ಕೈಮುಗಿದು ಬೇಡಿದೆನು
ಎನ್ನಬ್ಬೆ ಹಬ್ಬವನು ನೀಡೆನಗೆ ಎನುತೆ
ಮಂದಿರದ ಆ ಅಯ್ಯ ಪೂಜಾರಿ ದೂಡಿದನು
ತನುನೊಂದು ಮನನೊಂದು ಹುಚ್ಚಾಗಿ ಹೊರಟೆ

ವೀಣೆಯಾ ಸುಸ್ವರವು ಬನದಿಂದ ತೇಲಿಬರೆ
ಓಡಿದೆನು ಸರವರಸಿ ತಿಳಿಸರಸಿನೆಡೆಗೆ
ಬನವೆಲ್ಲ ಗಾನದಲಿ ತನುಮನವ ಮರೆಯುತಿರೆ
ತಂಗಾಳಿಯನ್ನೀಜಿ ಹಾರುತ್ತ ಹೋಗೆ

ಅರೆಬಿರಿದ ಮೊಗ್ಗೆಯಲಿ, ಹೊಂಗೆಯಾ ಟೊಂಗೆಯಲಿ
ಎಳೆದಳಿರ ಸಂಚಿನಿಂ ಚಿಮ್ಮುತಿರೆ ಗಾನ
ಎಲ್ಲೆಲ್ಲು ಶಾರದೆಯೆ ತುಂಬಿರಲು ಬನದಲ್ಲಿ
ಬಳಲುತ್ತ ಅರಿಯದೆಯೆ ಗೈದಿರ್ದೆ ಧ್ಯಾನ

ಓ ಮುದ್ದಿನೋವಾಯ್ತೆ ಎಂದೆನ್ನ ತಾಯ್ಗರಳು
ಸಂತಸವು ಚಿಮ್ಮುತ್ತ ಎದೆಯಾಳದಿಂದ
ಆ ಕರುಣೆ ತೊರೆಯಲ್ಲಿ ಕೊಚ್ಚಿರಲು ಕಾರಿರುಳು
ತೋರಿದಳು ಎನ್ನಬ್ಬೆ ತಾನಿರುವ ಅಂದ

ಜೋ ಎಂದು ನೀರಂಬು ಚಿಮ್ಮಿರಲು, ರಾಗರಸ,
ಮಳೆ ಬಿಲ್ಲ ಕಳೆಗೊಂಡು ನಸುನಗುತಲಿತ್ತು
ಜೋಗುಳವ ಹಾಡುತ್ತ, ಕುಣಿಯುತ್ತ ಆ ಸರಸ
ಜಲವಾತ ಎನ್ನೆದೆಯ ತಟ್ಟುತ್ತಲಿತ್ತು

ಮಳೆಬಿಲ್ಲ ತಾನುಟ್ಟು ಸಂತಸದಿ ಮುತ್ತಿಡಲು
ಓ ಅಮ್ಮ ಎಂದೆನುತೆ ಅಪ್ಪಿದೆನು ಭರದಿ
ಮುರಿದಿರ್ದ ವೀಣೆಯನು ಸರಿಪಡಿಸಿ ನುಡಿಸಿರಲು
ಶುಕ ಪಿಕಗಳೊಡನಾಡಿ ಹಾಡಿದೆನು ಮುದದಿ

## ನರ್ತಕಿ*

ಚಲುವಿನ ಬಳ್ಳಿಯು ಗೆಜ್ಜೆಯ ತೊಟ್ಟು
ತುಳುಕುತ ಬಳುಕುತ ಕುಣಿಯುತಿದೆ
ಮೋಹಕ ಕಿಂಕಿಣಿ ನಾದವನಿಟ್ಟು
ಹೆಜ್ಜೆಯ ಗೆಜ್ಜೆಯು ನುಡಿಯುತಿದೆ

ಗೆಜ್ಜೆಯ ನಾದಕೆ ಎನ್ನೆದೆ ನವಿಲು
ಗರಿಗೆದರುತೆ ನಲಿದುಲಿದಿತ್ತು
ಸಂತಸದೊರತೆಯ ಅಮೃತ ಹೊನಲು
ತುಂಬಿದ ಎದೆಯಿಂ ಚಿಮ್ಮಿತ್ತು

ನೃತ್ಯವೆ ಅವಳನು ಮೋಹಿಸಿ ಬಂತೋ
ಅಂಗದ ಕಾಂತಿಯ ಸಿಂಗರಕೆ
ನೃತ್ಯವೆ ಅವಳಾ ರೂಹನು ತಳೆಯಿತೊ
ತನ್ನೆದೆ ಕೋರಿಕೆ ಬೀರಲಿಕೆ

ಭಾವದ ಪುಷ್ಪದಿ ಜೇಂಗೊಡ ಹೊತ್ತು
ರಾಗ ಭ್ರಮರವ ಕರೆದಿಹಳು
ಆವುದೊ ಕನಸಿಗೆ ಜೀವವ ನಿತ್ತು
ಲೋಕಕೆ ನಾಕವ ತಂದಿಹಳು

---

*ಕಾಲೇಜಿನ ಸ್ನೇಹ ಸಮ್ಮೇಲನದಲ್ಲಿ ನರ್ತಕಿಯನ್ನು ಕಂಡಾಗ ಉದಿಸಿದ ಭಾವಲಹರಿ

# ಭಾವಸಾಮ್ರಾಜ್ಯ

ಎದೆ ವೀಣೆ ಮಿಡಿದಿರಲು ತೇಲುವುದು ಇಳೆಯೆಲ್ಲ
ಸೊಗಕೊಯ್ದು ಸುಧೆಯುಣಿಪ ರಾಗದಲ್ಲಿ
ರಾಗದಾ ಆಳದಿಂ ಚಿಮ್ಮುತಿಹ ಕಳೆಯೆಲ್ಲ
ಮುಳುಗಿಪುದು ಕಣ್ಮನವ ಭಾವದಲ್ಲಿ

ಹುಟ್ಟುವುದು ಹೊಸ ರಾಜ್ಯ ನಾನಲ್ಲಿಯಧಿರಾಜ
ಭಾವವೇ ನಲ್‌ರಾಣಿ ವಾಣಿ ಮಾತೆ
ಲೇಖನಿಯು ತಾಮಂತ್ರಿ ಪಟ್ಟವಣೆ ಗಿರಿರಾಜ
ಶುಕಪಿಕಗಳುಲಿವೆನ್ನ ನುತಿಪ ಗೀತೆ

ಹೊಸ ರಾಜ್ಯ ಹೊಸ ನಾಡು ನವ ಜೀವದಾ ಬೀಡು
ರಸಿಕರ್ಷಿ ತಾನಿಲ್ಲಿ ತಪಗೈಯುತಿಹನು
ಕಳಹಂಸ ಹರಿಣಗಳು ಶುಕ ಪಿಕಗಳೇ ನೋಡು
ಪ್ರಜೆಗಳಾಗಿಹರಿಲ್ಲಿ ಹೇಳಲೇನು ?

ಇಳೆಯೆನ್ನ ಅರಮನೆಯು ಸೊಕ್ಕಿರ್ದ ಗಿರಿ ಕಂಬ
ಹೊಳೆ ಮುತ್ತ ಪವಣಿಸಿದ ನೀಲ ಮಾಡ
ಪಚ್ಚನೆಯ ಹಸಿರೆಲ್ಲ ಹಾಸಿರಲು ಮನೆತುಂಬ
ತೋರಣವ ಕಟ್ಟುವವು ಮಿಂಚು ಮೋಡ

ಮೃದುತೆರೆಯ ತಲ್ಪದಲಿ ಮಲಗಿರಲು ತಂಗಾಳಿ
ರವಿಕಿರಣ ಬಳ್ಳಿಯಲಿ ಪರ್ಯಂಕವ
ತೂಗುತ್ತ ಹಾಡುವುದು ಜಲಕನ್ಯೆ ಮೈತಾಳಿ
ತೋರುವುದು ಸುಖ-ಸ್ವಪ್ನ ಸಾಮ್ರಾಜ್ಯವ

ಭಾವ ತಾವರೆ ನಗಲು ಭೃಂಗದೊಲು ಹಾರುವೆನು
ಹರುಷದಲಿ ಹಾಡುತ್ತ ಪ್ರೇಮ ಗೀತೆ
ನಲ್ಲೆಯಾ ಹೊಂಗೆನ್ನೆ ಪತ್ರದಲಿ ಬರೆಯುವೆನು
'ಮುತ್ತಿ'ನಾ ಅಕ್ಕರತೆ ನಾನು ಸೋತೆ

ಸಾರಥಿಯೆ ಕಾಲನಿರೆ ಬ್ರಹ್ಮಾಂಡ ರಥವೆನಗೆ
ಹಗಲಿರುಳೆ ಆ ರಥಕೆ ಬದಿಯ ಚಕ್ರ
ರವಿ ಶಶಿಯು ರಥವೆಳೆವ ಜೋಡಶ್ವ ತಾವಾಗೆ
ಹೆದರಿಪುದು ತಾನೆಂತು ಬಿದಿಯ ಚಕ್ರ?

ನವಸಿರಿಯ ರಥವೇರಿ ಬಿದಿಯನ್ನೆ ಬೆದರಿಸುತ
ಮಳೆಬಿಲ್ಲ ಟಂಕಾರ ಗೈಯಲಾನು
ಹನಿಯಂಬು ಚಿಮ್ಮಿರಲು ಸೊದೆವರ್ಷ ಸುರಿಯುತ್ತ
ತುಂಬುವುದೊ ಭೂ ನಾಕ ನರಕವನ್ನು

ನಿಚ್ಚವೂ ಸುರನೃತ್ಯ ಅಮೃತದ ಸೊಗದೂಟ
ಕುಣಿಸುವುದೊ ಕಾಮಿನಿಯ ಕಣ್ಣ ಕೂಟ
ಮಳೆಬಿಲ್ಲ ಸಪ್ತರತಿ ಕಮ್ಮಲರ ಕುಣಿದಾಟ
ಕಳನಳೆದ ಸುಳಿವಿರದ ಕವಿಯ ಮಾಟ

ಎಲ್ಲೆಲ್ಲು ಮುದದುಂಬಿ ಕವಿಕಾವ್ಯ ಸಾಮ್ರಾಜ್ಯ
ಜನಕೆಲ್ಲ ನವಜೀವ ತುಂಬದೇನು?
ನಲ್ಬಾವ ರಾಣಿ ಮಾವಾಣಿಯರದೀ ರಾಜ್ಯ
ಅವರಾಳ್ಕೆ ಬಾಳ್ಬೂಣ್ಕೆ ಸಲಿಸದೇನು?

# ಸಂಜೆ

ಸಂಜೆಯ ಹೊನ್ನಿನ ಬೆಳಕಲಿ ಕುಳಿತು
ಕೊಳಲನು ಊದಿದೆನು
ನೊಂಪಿನ ತಣ್ಣನೆಯಲರಲಿ ಬೆರೆತು
ಗೀತೆಯ ನುಡಿಸಿದೆನು

ರಂಗಿನ ಪ್ರಭೆಯಲಿ ಹೊಂಗಿನ ಪಯಿರು
ಲಾಸ್ಯದಿ ನಲಿದಿತ್ತು
ತುಂಬಿದ ಬಸಿರಿನ ಹೆಣ್ಣೊಲು ಹಸಿರು
ನಸುನಗೆ ಬೀರಿತ್ತು

ಸಂಧ್ಯಾರಾಗದಿ ತೇಲುತ ಹಕ್ಕಿ
ನಭದಲಿ ಚಿಮ್ಮಿಹವು
ಕೊಳಲಿನ ಗಾನಕೆ ತಾನವನಿಕ್ಕಿ
ತರುಲತೆ ಕುಣಿದಿಹವು

ಸಿಂಗರದಾಗರ ಹೊಂದಡಿಯಲ್ಲಿ
ತುರು-ಕರು ನಿಂದಿಹವು
ಎನ್ನಯ ಗಾನವನಾಲಿಸುತಲ್ಲಿ
ಮೈಮನ ಮರೆತಿಹವು

ರನ್ನದ ತಂಗೊಳದುಡಿಯಲಿ ತೇಲಿ
ಹಂಸಿಯು ಆಡುತಿದೆ
ಆ ತಿಳಿಜಲದಲಿ ಮೆಲ್ಲನೆ ಓಲಿ
ತಾವರೆ ತೂಗುತಿದೆ

ಹಂಸಿಯು ತಾವರೆ ಎಲ್ಲವು ಸೇರಿ
ಪಡುವಣ ನಿಟ್ಟಿಸಿವೆ
ಅಗಲುವ ಇನಿಯಗೆ ಶುಭವನು ಕೋರಿ
ಸೊಬಗನು ಬೀರುತಿವೆ

ಚಂದಿರ ಬಂದನು ಮಂಗಳವಾಂತು
ಬಾನಿನ ಮೇಲೇರಿ
ನನ್ನೋಲ್ಲಾಸದ ಗಾನಕೆ ಸೋತು
ತಾರೆಯು ಬಳಿಸಾರಿ

ನುಡಿದನು "ಪೋಗುವ ಆ ಚೆಲು ಭುವಿಗೆ
ಬಾ ಬಾರೇ ತಾರೆ!
ಹಸುರೆಳೆ ಹುಲ್ಲಲಿ ನಲಿಯುವ ಸವಿಗೆ
ಸರಿಯಿದೆಯೇ ನೀರೆ?"

ಚಂದಿರ ತಾರೆಯು ಸುಂದರ ಮಿಲನ
ಇಳೆಗೀಯಿತು ಜೀವ
ಸಗ್ಗವಿದೆನ್ನುತೆ ಉಸಿರಿತು ಪವನ
ತಾಕುತೆ ತನುಮನವ

ತಿಂಗಳಿನಂಗಳದಿಂದಲಿ ಚಿಮ್ಮಿತು
ಸಗ್ಗದ ಸಿಂಗಾರ
ಗಾನದಿ ಅಮೃತ ತುಂಬಿತು ಪೂತು
ಹೃದಯದ ಮಂದಾರ

## ತಪೋವನ

ಕುಣಿಯುತಿಹಳು ಬನದ ರಾಣಿ
ಜಗವ ಮರುಳುಗೊಳಿಸುತ
ಎತ್ತ ನೋಡೆ ಹಸಿರುವಾಣಿ
ದಿವ್ಯ ಸೊಬಗ ತುಂಬುತ

ಮಂದ ಪವನ ಕೊರಲ ತಾನ
ಇಳಿಯ ಗೂಢ ಗುಂಜನ
ದುಂಬಿ ಹಾಡೆ ತುಂಬಿ ಬಾನ
ಎದೆಗೆ ಅಮೃತ ಸೇಚನ

ಫಲಂ ತೀವಿ ಮನಂಬುಗುವ
ಮರದ ನೆಳಲ ಸೊಬಗಲಿ
ಮಲಗಿ ಹರಿಗೆ ದಿಟ್ಟಿಸೆ ಪಥವ
ಇದುವೆ ಸಗ್ಗ ಇಹದಲಿ

ಎಳಿಯ ತಳಿರ ಕೊರಳಿನಿಂದ
ಅಡಗಿ ನುಡಿಯೆ ಕೋಕಿಲ
ತನ್ನ ಇನಿಯ ಗಾನದಿಂದ
ನೋಂಕಿತಿದೆಯು ದೇಗುಲ

ಬೆಳ್ಳಿ ನೊರೆಯ ತೂರ್ವ ತೊರೆಯ
ದಿವ್ಯರಾಗ ಮಂಜುಳ
ರಸಾಕಾಂಕ್ಷಿ ರಸಿಕ ಋಷಿಯ,
ಭವ್ಯ ನಿಧಿಯು ಈ ಸ್ಥಳ

ತೇಲುತಿರುವ ಮೇಘ ಮಾಲೆ
ಇದುವೆ ಶಿವನ ನಿಲಯವೆಂದು
ಅರಸುತಿಹುದು ಗಿರಿಯ ಮೇಲೆ
ಶಿವನ ಶಿರದಿ ಮೆರೆಯಲೆಂದು

ಜೀವದೆರಡು ಪಥಗಳನ್ನು
ತೋರುವುದೀ ಕಾನನ
ಉಚ್ಚ ನೀಚ ಭಾವಗಳನು
ಅರಿಯಲೆಮ್ಮ ತನು-ಮನ

ನೀಲ ಗಗನ ಚುಂಬಿಸಿರುವ
ಗಿರಿಯೆ ಮನದ ರಾಜಸ
ಅರಿಯ ದಾಳ ತುಂಬಿ ಹರಿವ
ದರಿಯೆ ಎದೆಯ ತಾಮಸ

ಶಾಂತಿಯಮರ ಸುಖದ ಸೃಷ್ಟಿ
ದಿವ್ಯ ಸೌಧವೀವನ
ಕವಿಗೆ ನೀಡೆ ದಿವ್ಯದೃಷ್ಟಿ
ನಿತ್ಯವೀ ತಪೋವನ!

# ಗಿರಿ ಮೇಘ ಲಗ್ನ

ಹೊಂಗಿರಿಯ ತುಂಗದಲಿ ನಡೆದಿಹುದು ಪ್ರಣಯ
ಗಿರಿಯಪ್ಪಿ ಚುಂಬಿಸಿರೆ ನಸು ನಾಚಿದಿನಿಯ
ಮೇಘ ಮೊಗ ಕೆಂಪಾಗೆ ನವವಧುವ ತೆರದಿ
ಹಾಡುತಿದೆ ಕೋಕಿಲವು ತನ್ನಿನಿಯ ಸರದಿ

ಓ ಬನ್ನಿ ಗೋಧೂಳಿ ಲಗ್ನವಿದೆ ಎಂದು
ಹರುಷದಲಿ ವಧುವರರ ಹರಸಿ ನೀವೆಂದು
ಹಾಸಿಹುದು ಪಚ್ಚತೆನೆ ತೋರಣವೆ ನೀಲ
ರಂಗೋಲೆಯಿತ್ತಿಹವು ನಳನಳಿಪ ಕಮಲ

ಮಂಗಲವ ಹಾಡುತಿವೆ ಚೆಲುವಕ್ಕಿ ನಭದಿ
ಹೂಮಳೆಯ ಕರೆಯುತಿರೆ ಸುರರೆಲ್ಲ ಮುದದಿ
ನೀಡಿಹನು ನಲ್ಬೊತೆಗೆ ಹೊನ್ನುಡುಗೆ ಕಿರಣ
ಚೆನ್ನಿರುಳ ಕೋರುತ್ತೆ ಮರೆಯಾದನರುಣ

# ಮೋಕ್ಷಹಂಸ

ನೀಲಿಮೆ ಸರಸಿನ ತಿಳಿಜಲದಲ್ಲಿ
ಸುಂದರ ಹಂಸವು ತೇಲುತಿದೆ
ಬ್ರಹ್ಮನು ಕುಂಚವ ಭಾವದೊಳಲ್ಲಿ
ಅದ್ಭುತೆ ಬರೆದೊಲು ತೋರುತಿದೆ

ನೀಲವ ಚಿಮ್ಮುತೆ ಲಾಸ್ಯವ ಬೀರಿ
ಹೃದಯಕೆ ಮಾಟವ ಗೈಯುತಿದೆ
ಆಗಸವೀಜ ತೆ ಸೊಬಗನು ತೋರಿ
ಹೊನ್ನಿನ ರೂಪವ ತಾಳುತಿದೆ

ಸಂಜೆಯ ಮುನ್ನಿನ ಬೆಳಕಲಿ ಮಿಂದು
ಜಗವನೆ ಮೀಯಲು ಕರೆಯುತಿದೆ
ಅದರೊಲು ಸೊಗದಲಿ ತೇಲುವ ಎಂದು
ಎನ್ನಯ ಹೃದಯವು ಮಿಡಿಯುತಿದೆ

## ಉಷೆಗೆ

ಉದಯರಾಗ ನಿನದಿಸಿರಲು
ಲಜ್ಜೆಗೆಂಪು ತುಂಬುತಿರಲು
ಹೂವ ನಗೆಯ ನಕ್ಕು ಬಾ
ಎದೆಗೆ ಸೊದೆಯ ನೀಡು ಬಾ

ನಿನ್ನ ನಗೆಯ ಹಕ್ಕಿಯಿಂದ
ಕುಹೂ ಕುಹೂ ಗಾನದಂದ
ಎನ್ನ ಹೃದಯ ಸೇರಲಿ
ಜಗವ ಸೆರೆಯ ಗೈಯ್ಯಲಿ

ನಿನ್ನ ನಗೆಯೊಳಿಂದ ಉಡುಳಿ
ಹಸಿರ ಕೊರಳಿನಲ್ಲಿ ಅರಳಿ
ಸೊಂಪಿನರಳು ಮೊರೆಯಲಿ
ತನ್ನಲೀಲೆ ತೋರಲಿ

ಮುಗುಳು ಮಂಜಿನಲ್ಲಿ ಕರಗಿ
ಮಂಜು ಮುತ್ತಿನಲ್ಲಿ ಅಡಗಿ
ಬಯಲ ತುಂಬ ಸುರಿಯಲಿ
‘ನಿಚ್ಚ ಜಗವ ನಗಿಸಲಿ’

# ಕರೆ

ನಿನ್ನಯ ಕರೆಯನು ಎದೆದರೆ ದಾಲಿಸಿ
ಇರುಳನು ಲೆಕ್ಕಿಸದೈತಂದೆ
ಸುರಿಯುವ ಮಳೆಯಲಿ ಭಯವನು ಓಡಿಸಿ
ಮಿಂಚಿನ ತೆರದಲಿ ನಾ ಬಂದೆ

ನಿನ್ನೆದೆ ಕರೆದಿರೆ, ಇರುಳಿನ ನರಕವು
ನಾಕವದಾಯಿತು ಎನಗಾಗಿ
ಎಂತೋ ಏನೋ ಕೂಡಿರೆ ನಾವು
ನೀಡಲಿ ಏನನು ಗುರುತಾಗಿ ?

ತೋಡಿಸಲೆ ಮಿಂಚುವ ತಾರೆಗೆ ಮಾಲೆಯ
ಮೆರೆಯಲಿ ಕೊರಳೊಳು ಸಿರಿಮುತ್ತು!
ಅರಿದಿಹೆ ನಲ್ಲೆಯೆ, ನಿನ್ನಯ ಬಯಕೆಯ
ಅಲ್ಲವೆ ಒಂದೇ ಸವಿಮುತ್ತು?

# ಮತ್ಸರ

ನೇಸರ ನೂದಿದ ಬೆಳಗಿನ ಕೊಳಲಿಂ
ಹೊಮ್ಮಿರೆ ಸು-ಸಪ್ತ ರಾಗಗಳು
ಇಂಚರ ದುಲಿಯಲಿ ಮೂಡಿರೆ ಒನಪಿಂ
ರಾಗದಿ ಮಿನುಗುವ ರಂಗಗಳು

ಆ ತಿಳಿ ರಂಗದಿ ಮುಗುಳನು ಚಿಮ್ಮುತ
ಕುಣಿವರೆ ಗುಲಾಬಿ ಹೊಗರೇರಿ
ಬೆಳಗಿನ ಸೊಬಗಲಿ ಲಾಸ್ಯದಿ ಮಣಿಯುತ
ತಂತುವ ಮಿಡಿಯಿತು ಎದೆ ಸೇರಿ

ನಿಂದಿರೆ ಗುಲಾಬಿಯಂದವ ನೋಡುತ
ಬಂದಳು ಪದ್ಮಳು ಅರಿಯದಲೆ
ಏನನು ನೋಡುವಿರೆಂದಳು ಸಾರುತ
ಎನ್ನಯ ಕೊರಳನು ಬಳಸುತಲೆ

ಹೂವನು ನೋಡೇ ಗಾಳಿಗೆ ಬಳಕುತ
ನಿಂದಿದೆ ಮುಗುಳನು ಬೀರುತ್ತ
ಎನ್ನಲು ರಾಣಿಯು ಹಿಂದಕೆ ಸೆಳೆಯುತ
ಕೇಳ್ದಳು ಮುನಿಸನು ತೋರುತ್ತ

ಗುಲಾಬಿ ಚೆಂದವೊ ನಾನೇ ಚೆಂದವೊ
ಹೇಳಿರಿ ಎನ್ನಲು, ನಾನಗುತ
'ನಿನಗಿಂ ಹೂವೇ ಬಲು ಚೆನ್ನೆನ್ನಲು'
ಸರಿದಳು ನಾರಿಯು ಸಿಡಿಯುತ್ತ

ಬಳುಕುವ ಹೂವದು ಅಳುಕುತ ಅವಳಡಿ
ಹುಡಿಯಲಿ ಹೊರಳಿತು ಎನ್ನೆದುರು
ಹೆಣ್ಣಿನ ಎದೆಯಣ ಮತ್ಸರ ನೋಡಿ
ಅಚ್ಚರಿ ಮೂಡಿತು ಮನದೆದುರು

# ಒಡೆದ ಕನ್ನಡಿ

ಏಕೆ ನಿಂದೆ ಅಳಲುತಿಲ್ಲ
ಒಡೆದು ಹೋಯ್ತೆ ಕನ್ನಡಿ ?
ಕೈಯೊಳಿದ್ದ ಚಂದ್ರವೆಲ್ಲ
ಉದುರಿತೇನೆ ನಿನ್ನಡಿ

ಕೈಯು ಹಿಡಿತ ಜಾರಿತೇನು
ಮರುಗಲೇಕೆ ಮರಮರ
ಒಡೆದ ಚೂರು ತೋರದೇನು
ನಿನ್ನ ರೂಹು ಸಾಸಿರ

ನಲ್ಲ ಬೇಗ ಬರುವನೆಂಬ
ಹರುಷವನ್ನೆ ನುಂಗಿತೆ ?
ನಲ್ಲ ಬರಲು ಮೊಗದಿ ಕಾಂಬ
ಚೆಲುವ ರಾಗ ಇಂಗಿತೆ ?

ಮುಗ್ಧೆ ನೀನು ಅರಿಯೆಯೇನು
ಜಗವದೊಂದು ಕನ್ನಡಿ
ನಿನ್ನ ಹಿಡಿತದಲ್ಲಿ ತಾನು
ಬಯಸಬಹುದು ನಿನ್ನಡಿ

ನಿನ್ನ ಸೆರೆಯೊಳಿಂದ ಜಾರಿ
ಮುಕುರದೋಲ್ ಸಾಸಿರ–
ರೂಪಿನಂತರಂಗ ತೋರಿ
ನಡುಗಿಸುವುದು ಥರಥರ

ತಾಳು ಬೇಗ ಬಹನು ನಲ್ಲ
ನಿನ್ನನಪ್ಪಿ ಚುಂಬಿಸೆ
ತಿಲಕ ನೊಸಲಿಗಿಡಲು ಬಲ್ಲ
ರಂಭೆಯಂತೆ ಬಿಂಬಿಸೆ

# ನನ್ನ ಹಾಡು

ಮೂಡಣದುಡಿಯಿಂ ಚಿಮ್ಮುತ್ತೆ ಉಷೆಯು
ರಸವನು ಹರಿಸುತೆ ಬರುತಿರಲು
ತನಿರಸ ಬಯಸಿದ ಎನ್ನೆದೆ ತೃಷೆಯು
ಸೊಗವನು ಹೀರುತ ತಣಿದಿರಲು
ಎನ್ನೆದೆಯಂತೆಯೆ ನಲಿದಿಹ ಜಗವನು
ಕಾಣುತೆ ವೈಮನ ಮರೆದಿಹೆನು
ಕಣಕಣದಲ್ಲೂ ಚಿಮ್ಮಿಹ ಸೊಗವನು
ಎನ್ನಯ ಹಾಡಲಿ ತುಂಬಿಹೆನು

ನೀಲಿಮ ಬಾನಲಿ ತೇಲಿಹ ಮೇಘ
ತೆರತೆರ ವೇಷದಿ ಮೆರೆದಿರಲು
ತುಂಬಿರೆ ಸುತ್ತಲು ಪ್ರೇಮದ ಓಘ
ಗಿರಿಯನು ಸರಸಕೆ ಕರೆದಿರಲು
ಪ್ರಣಯದ ಭರದಲಿ ಅಪ್ಪಿರೆ ಗಿರಿಯು
ಮೇಘವ ಮೆಲ್ಲನೆ ಚುಂಬಿಸುತೆ
ಎನ್ನಯ ಹೃದಯದಿ ಅಡಗಿಹ ಕವಿಯು
ಹಾಡಿದ ಪ್ರೇಮದ ಸವಿಗೀತೆ

ಕೊಳದಲಿ ಅರಳಿಹ ತಾವರೆ ಬಳುಕಿ
ಅಪ್ಸರೆಯಂದದಿ ನರ್ತಿಸಲು
ತುಂಬಿಯು ಗುಂಗುಂಗಾನದಿ ತುಳುಕಿ
ಸುಧೆಯನು ಸವಿಯಲು ಒಂದಿರಲು
ಅನುಪಮ ಸಂಗಮ ಸರಸಿಯು ಕಂಡು
ತೆರೆಯಲಿ ಮುಗುಳನು ಬೀರಿತ್ತು
ಹೃದಯವು ಕಾವ್ಯದ ಸೊಗವನು ಉಂಡು
ವಲ್ಲಿಯು ಆಸರೆ ಬಯಸಿತ್ತು

ಹಸಿದಿಹ ಕಂದನ ಕಂಬುಳಲೆತ್ತಿ
ತಾಯಿಯು ಎದೆ ಹಾಲುಣಿಸುತಿರೆ
ಜೋಗುಳ ಹಾಡುತೆ ಹೃದಯಕೆ ಒತ್ತಿ
ಮೆಲ್ಲನೆ ಮುತ್ತನು ನೀಡುತಿರೆ
ಸುಧೆಯನು ಸವಿದಿಹ ಕಂದನ ಮೊಗವು
ಸುಂದರ ಹೂನಗೆ ಬೀರುವುದು
ವಾಣಿಯೆ ಮಾತೆಯು ನಾನೇ ಮಗುವು
ಮನ ಕಾವ್ಯಾಮೃತ ಹೀರುವುದು
ಮಲ್ಲಿಗೆ ಬಳ್ಳಿಯು ಮುಗುಳನು ಹರಹಿ
ಹೂಗಳ ಹಾಸಿಗೆ ಹಾಸಿರಲು
ನಲ್ಲನ ಬರವನು ಆಶಿಸಿ ವಿರಹಿ
ನಿಂದೊಲು ಮನಸಿಗೆ ತೋರಿರಲು
ಎನ್ನನು ಕಾಣುತೆ ಮೆಲ್ಲನೆ ಬಂದು
ಪವನದಿ ತೂರುತೆ ಉಸುರಿದಳು
ಹಾಡೆಲೆ ಕವಿಯೇ ಗೀತೆಯನೊಂದು
ನಲ್ಲನ ಕರೆತರಲೆಂದಿಹಳು
ಒಡಲಲಿ ಸಿಡಿಲನು ಹೊತ್ತಿಹ ಕಡಲು
ತುಂಬಿರೆ ಸಿರಿಬಾನಂಗಣಾ
ಸಾಸಿರ ಕಲ್ಪನೆ ಕಂಗಳ ನವಿಲು
ಸುಡಿಸಿರೆ ಗೆಜ್ಜೆಯ ರಿಂಗಣಾ
ನವಿಲಿನ ಕುಣಿತಕೆ ಸಂತಸ ಉಕ್ಕಿ
ಹಾಡುವ ಕೋಕಿಲ ಕೂಜನಾ
ಕೇಳುತೆ ತಾನೂ ಎನ್ನದೆ ಹಕ್ಕಿ
ಹಾಡುತೆ ನೀಡಿತು ರಂಜನಾ

ಇನಿಯನ ಬರವನ್ನು ಕಾಯ್ದಿಹ ರಮಣಿ
ನಲ್ಲನ ಕಾಣುತೆ ನಸು ನಾಚಿ
ಕೆನ್ನಗೆಯರಳನು ತೂರಿರೆ ತರುಣಿ
ನಲ್ಲನು ತಬ್ಬುವ ತೆರ ಬಾಚಿ
ನಲ್ನಿಶೆ ಲಜ್ಜೆಯನಾಂತಿರೆ ತರಣಿ
ನಿಶೆಯರಸಿಯಬಳಿ ನಾರಿಹನು
ಶುಕ—ಪಿಕ ಕೂಜನ ನಿನದಿಸಿ ಧರಣಿ
ನಾಕದೊಲಾಗಿರೆ ಹಾಡಿದೆನು

ಇನನಿಶೆ ಮಿಲನದ ಮುಗುಳೊಲು ಅರಳಿ
ಬಂದಿರೆ ಸುಂದರ ಚಂದಿರನು
ಕಣ್ಣನು ಮಿಟುಕಿಸಿ ಕರೆದಿಹ ಮಳ್ಳಿ
ತಾರೆಯ ಜಾಲದಿ ಸಿಲುಕಿಪನು
ಚಂದಿರ ಜಾರಲು ಯತ್ನಿಸುತಿರಲು
ಬೀಸಿರೆ ಮೋಡದ ಬಲೆಯನ್ನು
ಗಿರಿವನ ಜೊನ್ನವ ಕುಡಿಯುತಲಿರಲು
ಹಾಡುತ ಹೀರಿದೆ ಸುಧೆಯನ್ನು

ತಾರೆಯ ಜಾಲದಿ ಬಳಲಿಹ ಶಶಿಯು
ಕಂಬನಿ ಮಿಡಿಯುತೆ ಬಾಡಿರಲು
ಇರುಳಲಿ ಭೂಮಿಗೆ ಉದುರಿದ ಹನಿಯು
ಮುತ್ತೊಲು ಹಸಿರಲಿ ಮೂಡಿರಲು
ಮುತ್ತನು ಅರಸುತೆ ಹಾಡಿದೆ ಕೆಲವು
ಬೆಳಗೂ ಬೈಗೂ ಕಲಿಸಿದುದ
ಅಮ್ಮನ ಮಡಿಲಿಂ ಕದ್ದೆನು ಹಲವು
ಎನಗೆಂದೇ ತಾ ಹಾಡಿದುದ

ಹೇಳಿದೆ ರಸಿಕಗೆ ನನ್ನವೆ ಎಂದು
ನಂಬಿದ ಅಹುದೆಂದೀ ಹಾಡು
ಒಳದನಿ ನುಡಿವುದು ವಾಣಿಯವೆಂದು
ಆದರು ನನ್ನದೆ ನಲುಹಾಡು

---

ಪಶುಪತಿಯವರ ಕವಿತ್ವ ಬೂದಿಮುಚ್ಚಿದ ಕೆಂಡದಂತೆ ಅವರ ಹೃದಯದ ಮೂಲೆಯಲ್ಲಿ ಬಾಳದ ಕಾವಿನಲ್ಲಿ ಕರಗಿ ಕುದಿದು ಪರಿಶುದ್ಧವಾಗಿ ಒಳಗೊಳಗೇ ಲಕಲಕಿಸಲು ಯತ್ನಿಸುತ್ತಿದೆ ಇದ್ದ ಕೆಲವೊಂದು ಅಂಗಗಳ ವರ್ಣನೆಗಳು ಸರಸವಾಗಿ ಒಂದು ಈ ಪುಟ್ಟ ಕೃತಿಗೆ ಮೆರುಗನ್ನು ತಂದಿವೆ ತ್ರಯೋದಶ ಗುಣ ತಾಂಬೂಲದಂತೆ ಒಟ್ಟಿಗೆ ರಾಗರಂಜಿತವಾಗಿದೆ ಮೃದುಮಧುರ ಪದವಿಲಾಸ, ರಮ್ಯ ಕಲ್ಪನಾವಿಲಾಸ, ಲಲಿತಭಾವಪ್ರಕಾಶ ಈ ಮೊದಲಾದ ಕಾವ್ಯ ಗುಣಗಳು 'ಪಶುಪತಿ ಅವರು ಕವಿಯೆಂದು ಕೈಯೆತ್ತಿ ಸಾರುತ್ತಿವೆ ಅವರ ಕಾವ್ಯದೇವಿಯು ಸಲ್ಲಲಿತಭಾವಾಂಬರ ಧರಿಸಿ, ಮಲ್ಲಿಗೆಯ ಮಲರುಗಳಲ್ಲಿ ಮೃದುನಗೆ ಬೀರಿಸಿ ಮೆಲುಮೆಲನೆ ಬಳುಕುತ್ತ ಬೆಳ್ಳಿನೋಟ ಹರಿಸಿ ಬರುವಂತೆ ಭಾಸವಾಗುತ್ತಿದೆ ಅವಳ ಉಪಾಸನೆಯ ಬಲದಿಂದ ಕವಿಹೃದಯದ ಭಾವಸಾಮ್ರಾಜ್ಯದ ಒಳಗೂ ಹೊರಗೂ ಎಲ್ಲೆಲ್ಲೂ ಮುದಮುಂಬಿ ಬರಲಿ! ಈ ಉಳಿವೆ 'ಯಾತ್ರೆ' ಯಿಂದ "ನೀನು ಕವಿಯಾಗಿ ಉಳಿವೆ" ಎಂದು ವಾಣಿ ಅವರನ್ನು ಆಶೀರ್ವದಿಸದಿಹಳೇ !

**—ಮುನ್ನುಡಿಯಿಂದ**

## ಬರಿಯಲಿರುವ ಮೊಗ್ಗುಗಳು

## 'ಭರತಿ ಓಹಟಿ'

ಜೀವನ ಜಲಧಿಯಲ್ಲಿ ಅನಿವಾರ್ಯವಾಗಿ ಏಳುವ 'ಭರತಿ–ಓಹಟಿ'ಗಳ ಸರಸ ಸುಂದರ ಕಾವ್ಯಚಿತ್ರ

## ತಬ್ಬಲಿ

ಅನಾಥನೊಬ್ಬನ ಕರುಣಾಮಯ ಜೀವನ ಚಿತ್ರ

**ವೀರಭದ್ರ ಶಟ್ವೆರ**—ಅವರಿಂದ

## ಪದ್ಮ-ಪರಾಗ

ಎರಡು ಮುಗ್ಧ ಹೆಣ್ಣು ಹೃದಯಗಳ ಒಲುಮೆಯ ಚಿತ್ರಣ

## ಮಧುಚಂದ್ರ

ಜೀವನದ ಒಲುಮೆ–ನಲುಮೆಗಳ ಕವನ ರೂಪ